# ಮೀನುಗಾರ ಮಹಿಳೆಯರ ಸಾಮಾಜಿಕ ಅಧ್ಯಯನ

( ಉಡುಪಿ ಜಿಲ್ಲೆಯ ಕಡೇಕಾರು ಗ್ರಾಮವನ್ನು ಅನುಲಕ್ಷಿಸಿ )

( ೨೦೧೬-೧೭ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್ ಸಂಪ್ರಬಂಧ )


ಸಂಶೋಧಕರು

ಶಿಲ್ಪ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ - ೫೮೩ ೨೭೬

ಮಾರ್ಗದರ್ಶಕರು

ಡಾ. ಹಿ.ಚಿ. ಬೋರಲಿಂಗಯ್ಯ

ಪ್ರಾಧ್ಯಾಪಕರು





ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ : ೫೮೩ ೨೭೬

೨೦೧೬-೧೭

# ಮೀನುಗಾರ ಮಹಿಳೆಯರ ಸಾಮಾಜಿಕ ಅಧ್ಯಯನ

## (ಉಡುಪಿ ಜಿಲ್ಲೆಯ ಕಡೇಕಾರು ಗ್ರಾಮವನ್ನು ಅನುಲಕ್ಷಿಸಿ)

(೨೦೧೬-೧೭ನೇ ಸಾಲಿನಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್ ಸಂಪ್ರಬಂಧ)

ಸಂಶೋಧಕರು
ಶಿಲ್ಪ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬



ಮಾರ್ಗದರ್ಶಕರು
ಡಾ. ಹಿ.ಚಿ. ಬೋರಲಿಂಗಯ್ಯ
ಪ್ರಾಧ್ಯಾಪಕರು



ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವ ವಿದ್ಯಾಲಯ ಹಂಪಿ,
ವಿದ್ಯಾರಣ್ಯ : ೫೮೩ ೨೭೬
೨೦೧೬-೧೭

ಡಾ. ಹಿ.ಚಿ.ಬೋರಲಿಂಗಯ್ಯ
ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು,
ಬುಡಕಟ್ಟು ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ ಹಂಪಿ.

## ಮಾರ್ಗದರ್ಶಕರ ದೃಢೀಕರಣ ಪತ್ರ

ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದಲ್ಲಿ ಎಂ.ಫಿಲ್ ವಿದ್ಯಾರ್ಥಿನಿಯಾದ ಶಿಲ್ಪ ಇವರು ೨೦೧೬-೧೭ನೇ ಸಾಲಿನಲ್ಲಿ ನನ್ನ ಮಾರ್ಗದರ್ಶನದಲ್ಲಿ 'ಮೀನುಗಾರ ಮಹಿಳೆಯರ ಸಾಮಾಜಿಕ ಅಧ್ಯಯನ (ಉಡುಪಿ ಜಿಲ್ಲೆಯ ಕಡೇಕಾರು ಗ್ರಾಮವನ್ನು ಅನುಲಕ್ಷಿಸಿ)' ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ದಿನಾಂಕ : 12-2-2012

ಸ್ಥಳ : ವಿದ್ಯಾರಣ್ಯ.

# ಸಂಶೋಧಕರ ದೃಢೀಕರಣ ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯದ **ಬುಡಕಟ್ಟು ಅಧ್ಯಯನ** ವಿಭಾಗದಲ್ಲಿ ಎಂ.ಫಿಲ್ ವಿದ್ಯಾರ್ಥಿನಿಯಾದ ಶಿಲ್ಪ ಎಂಬ ಹೆಸರಿನ ನಾನು ೨೦೧೬–೧೭ನೇ ಸಾಲಿನಲ್ಲಿ ಡಾ.ಹಿ.ಚಿ.ಬೋರಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ **'ಮೀನುಗಾರ ಮಹಿಳೆಯರ ಸಾಮಾಜಿಕ ಅಧ್ಯಯನ (ಉಡುಪಿ ಜಿಲ್ಲೆಯ ಕಡೇಕಾರು ಗ್ರಾಮವನ್ನು ಅನುಲಕ್ಷಿಸಿ)'** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಿದ್ದು, ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

**ಸಂಶೋಧಕರು**

ಶಿಲ್ಪ
ಎಂ.ಫಿಲ್ ವಿದ್ಯಾರ್ಥಿನಿ
**ಬುಡಕಟ್ಟು ಅಧ್ಯಯನ ವಿಭಾಗ,**
**ಕನ್ನಡ ವಿಶ್ವವಿದ್ಯಾಲಯ ಹಂಪಿ.**

ದಿನಾಂಕ: 30/07/17

ಸ್ಥಳ : ವಿದ್ಯಾರಣ್ಯ

# ಮೀನುಗಾರ ಮಹಿಳೆಯರ ಸಾಮಾಜಿಕ ಅಧ್ಯಯನ

## (ಉಡುಪಿ ಜಿಲ್ಲೆಯ ಕಡೇಕಾರು ಗ್ರಾಮವನ್ನು ಅನುಲಕ್ಷಿಸಿ)

## ಅಧ್ಯಾಯ ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪೀಠಿಕೆ**

ಉಡುಪಿ ಜಿಲ್ಲೆಯ ಭೌಗೋಳಿಕ ಸನ್ನಿವೇಶ ಹಾಗೂ ವಾಯಗುಣದಿಂದಾಗಿ ಹೆಚ್ಚಿನ ಜಲಸಂಪನ್ಮೂಲ ಇರುತ್ತದೆ. ನೈರುತ್ಯ ಮಾರುತಗಳು ಇಲ್ಲಿನ ತೀರ ಮತ್ತು ಘಟ್ಟ ಪ್ರದೇಶಗಳಲ್ಲಿ ಜೂನ್ ನಿಂದ ಸೆಪ್ಟಂಬರ್ ವರೆಗೆ ಹೇರಳವಾಗಿ ಮಳೆ ಸುರಿಸುತ್ತವೆ. ಮುಂಗಾರಿನ ಕಾಲದಲ್ಲಿ ಬರುವ ಮಳೆಯಿಂದಾಗಿ ಪಶ್ಚಿಮ ಘಟ್ಟಗಳಲ್ಲಿ ಅನೇಕ ನದಿ ತೊರೆಗಳು ಹುಟ್ಟಿ ಪಶ್ಚಿಮಭಿಮುಖವಾಗಿ ಹರಿದು ಬರುತ್ತವೆ. ಈ ವೇಳೆಯಲ್ಲಿ ನೀರು ಅಧಿಕವಾಗಿರುತ್ತದೆ. ಹಿನ್ನೀರು ಪ್ರದೇಶ ದೋಣಿಗಳ ಸಂಚಾರಕ್ಕೆ ಅನುಕೂಲಕರವಾಗಿದೆ. ಜಿಲ್ಲೆಯಲ್ಲಿ ಜಲಸಂಪತ್ತು ಹೇರಳವಾಗಿರುವುದರಿಂದ ವ್ಯವಸಾಯಕ್ಕೂ ಉಪಯೋಗವಾಗುತ್ತದೆ. ಉಳಿದ ಜಲಸಂಪತ್ತು ಸಮುದ್ರಕ್ಕೆ ಹರಿದು  ಹೋಗುತ್ತದೆ. ಸಮುದ್ರ ಮಟ್ಟದಿಂದ ಹೆಚ್ಚು ಎತ್ತರವಲ್ಲದ ಭೂ ಪ್ರದೇಶವೇ ಇಲ್ಲಿ ಅಧಿಕ ಇರುವುದರಿಂದಾಗಿ ವರ್ಷದ ಬಹುಭಾಗ ಮೈಯಲ್ಲಿ ಜೆವರು ಬರಿಸುವ ಉಷ್ಣಾಂಶ ಮತ್ತು ತೇವಾಂಶದಿಂದ ಕೂಡಿದ ಸೆಕೆ ಇರುತ್ತದೆ. ಹಗಲು ರಾತ್ರಿ ಸರಾಸರಿ ಉಷ್ಣಾಂಶ ೩೮. ಚಳಿಗಾಲದಲ್ಲಿ ಗರಿಷ್ಠ ಉಷ್ಣಾಂಶ ಅಪರೂಪಕ್ಕೆ ಏರಿಕೆಯಲ್ಲೆ ಇರುತ್ತದೆ.  ಕೆಲವು ವರ್ಷ ಹವಾಮಾನದ  ಕನಿಷ್ಠ ಉಷ್ಣಾಂಶ ೧೭ ಸೆ. ಗೆ ಇಳಿಯುತ್ತದೆ. ಮಾರ್ಚ್ ನಿಂದ ಮೇ ತಿಂಗಳ ಅಂತ್ಯದ ವರೆಗೆ ಕಡು ಬೇಸಿಗೆಯಿದ್ದು, ವಿರಳವಾಗಿ ಜೀಗು ಮಳೆಯಾಗುತ್ತದೆ. ಅಧಿಕ ಮಳೆ, ೬೪೬೪ ಮತ್ತು ೬೩೩೫. ಮೀ.ಮೀ ಗಳಷ್ಟು ದಾಖಲಾಗಿದೆ.

ಉಡುಪಿ ಜಿಲ್ಲೆಯ ಆರ್ಥಿಕ ಚಟುವಟಿಕೆಗಳಲ್ಲಿ ಮೀನುಗಾರಿಕೆ ಗಮನಾರ್ಹ ಸ್ಥಾನ ಪಡೆದಿದೆ. ಹಿಂದಿನಿಂದಲೂ, ಈ ಜಿಲ್ಲೆ ವ್ಯಾವಹಾರಿಕ ಮೀನುಗಾರಿಕೆಗೆ ಹೆಸರಾಗಿದೆ. ಈ ಜಿಲ್ಲೆಯ ಕಡಲ ತೀರ ೧೪೧ ಕಿಮೀ.ಇರುತ್ತದೆ. ಉಡುಪಿ ಬಳಿ ಇರುವ ಮಲ್ಪೆಯಲ್ಲಿ ಮತ್ಸ್ಯೋದ್ಯಮ ಪ್ರಗತಿಯಲ್ಲಿದೆ. ಹಿಂದೆ ಮೀನುಗಾರರು ಸಿಮೀತ  ಸಾಮಾಗ್ರಿಗಳಿಂದ ಪ್ರಗತಿ ಹೊಂದಿದೆ ನಾಡದೋಣಿಗಳಲ್ಲಿ ಹೋಗಿ ಮೀನು ಹಿಡಿದು ತರುತ್ತಿದ್ದರು. ಈಗ ಕಾಲ ಬದಲಾಗಿದೆ ಆಧುನಿಕ ಯಂತ್ರ ಚಾಲಿತ ಮೋಟಾರ್ ದೋಣಿಗಳು, ಬಲೆಗಳಿಂದಾಗಿ ವೈಜ್ಞಾನಿಕವಾದ ಮೀನುಗಾರಿಕೆ ಮುಂದುವರಿದಿದೆ. ಇದರ ಸಹಾಯದಿಂದ ಸಮುದ್ರದಲ್ಲಿ ಆಳವಾಗಿ ಸಾಗಿ ಮೀನನು ಹಿಡಿಯುತ್ತಾರೆ. ಇಂದು ಮೀನು ಮಾತ್ರವಲ್ಲದೆ ಏಡಿ, ಸಿಗಡಿ, ಚಿಪ್ಪುಗಳು, ಹವಳದ ಸಂಗ್ರಹಣೆಯು ಮೀನುಗಾರಿಕೆಯ ಭಾಗವಾಗಿ ಬೆಳೆದಿದೆ. ಇಲ್ಲಿ ಹಿಡಿಯುವ ಮೀನುಗಳಲ್ಲಿ ಬಂಗುಡೆ ಪ್ರಸಿದ್ಧವಾಗಿದೆ ಯಥೇಚ್ಚವಾಗಿ ದೊರಕುತ್ತದೆ. ಮಾಂಸ ಹಾಗು ರುಚಿಯಲ್ಲಿ ಬಂಗುಡೆಯ ಜೊತೆಗೆ ಭೂತಾಯಿ ಎಂಬ ಚಿಕ್ಕ ಮೀನು ಸಹ  ಜನಪ್ರಿಯವಾಗಿದೆ. ವಾರ್ಷಿಕವಾಗಿ ಇಲ್ಲಿ ಹಿಡಿಯಲಾಗುವ ಮೀನು ೨೦೦೬ರಲ್ಲಿ ೨೦೩೮೮. ಪ್ರಮಾಣವಾಗಿದೆ.

ಒಳನಾಡ ಮೀನುಗಾರಿಕೆಯಲ್ಲಿ ಸ್ಯಾಂಡೀಶ್ ಮೀನು ಲಭ್ಯವಿರುತ್ತದೆ. ಇದರಿಂದ ಎಣ್ಣೆಯನ್ನು ತೆಗೆದು ವಿದೇಶಕ್ಕೆ ಮಾರುತ್ತಾರೆ. ಮೀನು ಸಾಗಾಣಿಕೆ, ಮೀನು ಮಾರಾಟ, ಮೀನು ಸಂಸ್ಕರಣೆ, ಮೀನನ್ನು ಒಣಗಿಸುವುದು, ಡಬ್ಬಕ್ಕೆ ತುಂಬುವ, ಮೀನು ಕೆಡದಂತೆ ರಕ್ಷಿಸುವ ವಿವಿಧ ಉದ್ಯಮಗಳಲ್ಲಿ ಅನೇಕ ಮೀನುಗಾರರಿಗೆ ಉದ್ಯೋಗ ದೊರಕಿದೆ. ಸೆಪ್ಟಂಬರ್ ನಿಂದ ಪೆಬ್ರವರಿಯ ವರೆಗೆ ಮೀನುಗಾರಿಕೆ ನೆಡೆಯುತ್ತದೆ. ಎಪ್ರೀಲ್‌ನಲ್ಲಿ ಸಣ್ಣ ಪ್ರಮಾಣದ ಮೀನುಗಾರಿಕೆ ಇರುತ್ತದೆ. ಆಗಸ್ಟ್ –ಮೇ ನಲ್ಲಿ ಮುಂಗಾರು ತೀವ್ರತೆಯ ಕಾರಣದಿಂದಾಗಿ ಈ ಅವಧಿ ಮೀನುಗಾರಿಕೆ ಇರುವುದಿಲ್ಲ. ಆದ್ದರಿಂದ ಸಾಕಷ್ಟು ಜನ ನಿರುದ್ಯೋಗ ಸಮಸ್ಯೆಯನ್ನು ಎದುರಿಸುತ್ತಾರೆ. ಸೀಗಡಿಯನ್ನು ಬೆಳಸುವ ಕಾಯಕ್ಕಕೆ ಮಾರುಕಟ್ಟೆಯಲ್ಲಿ ಪ್ರಾಮುಖ್ಯತೆ ಬಂದಿದೆ. ವಾರ್ಷಿಕವಾಗಿ ಇಲ್ಲಿ ಹಿಡಿಯಲಾದ ಮೀನು ೨೦೦೬ರಲ್ಲಿ ೬೨.೬೮ ಪ್ರಮಾಣವಾಗಿದೆ.

ಕರಾವಳಿ ಜಿಲ್ಲೆಗಳಾದ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿವೆ. ಮೀನುಗಾರಿಕೆಯನ್ನು ನಂಬಿ ಹಲವಾರು ಕುಟುಂಬಗಳು ಜೀವನವನನ್ನು ನಡೆಸುತ್ತಿವೆ. ಸಮುದ್ರವನ್ನು ಗೌರವಿಸುವ ಹಾಗೂ ಪೂಜಿಸುವ ಮೀನುಗಾರರ ಕುಟುಂಬಗಳು ಸಮುದ್ರದ ಮೇಲೆ ಸಂಪೂರ್ಣ ಅವಲಂಬಿತವಾಗಿವೆ. ಪಶ್ಚಿಮ ಅರಬ್ಬಿ ಸಮುದ್ರವು ತುಳುನಾಡಿನ ಜನರಿಗೆ ವರದಾನವಾಗಿದೆ. ಅನೇಕ ಬಂದರು ಪಟ್ಟಣಗಳ ಹುಟ್ಟಿಗೂ ಕಾರಣವಾಗಿದೆ. ಅಬ್ಬರದಿಂದ ಘೋರ್ಗರೆವ ಕಡಲು, ಪ್ರತಿ ಸೆಕೆಂಡಿಗೂ ದರೆಗೆ ಅಪ್ಪಳಿಸುತ್ತಿರುವ ತೆರೆಗಳು, ಪದೇ ಪದೇ ಸಂಭವಿಸುವ ಪ್ರವಾಹ, ಮಾರುತಗಳು ಹೊತ್ತು ತರುವ ಅಪಾಯಗಳು ಇಂತಹ ಕಡಲ ಅಂಗಳದಲ್ಲಿ ದುಡಿಮೆ ಹಾದಿಯನ್ನು ಕಟ್ಟಿರುವ ಬೆಸ್ತರ ಬದುಕು ನಿಜವಾಗಿಯೂ ಸಾಹಸಮಯ. ಮಾನವನಿಗೆ ಮಣ್ಣು ಹೇಗೆ ಮುಖ್ಯವೋ ಹಾಗೆ ಕಡಲೂ ಸಹ ಅಷ್ಟೇ ಮುಖ್ಯವಾಗಿದೆ. ಕಡಲಿನ ಉತ್ಪನ್ನಗಳು ನಮ್ಮ ದೇಶವನ್ನು ಸಮೃದ್ಧವನ್ನಾಗಿಸಿವೆ. ಮೀನುಗಾರಿಕೆ ನಮ್ಮ ರಾಷ್ಟ್ರದ ಅತಿ ದೊಡ್ಡ ಉದ್ಯಮವಾಗಿದೆ. ಮೂರು ಭಾಗವು ಸಮುದ್ರದಿಂದ ಆವೃತವಾಗಿದ್ದು, ಒಂದು ಪರ್ಯಾಯ ದ್ವೀಪವೆನಿಸಿದ ಭಾರತವು ಮೀನುಗಾರಿಕೆಗೆ ಹೆಚ್ಚಿನ ಅವಕಾಶ ಕಲ್ಪಿಸಿದೆ.

ಕರ್ನಾಟಕದಲ್ಲಿ ಬೆಸ್ತರನ್ನು ಮೊಗವೀರ, ಮರಕಾಲ, ಪಟ್ಟದವ, ಬೋವಿ, ನಾಯಕ(ನಾವಿಕ), ಗಂಗಾಮತಸ್ಥ, ಅಂಬಿಗ, ಖಾರ್ವಿ ಮುಂತಾದ ನಾಮಧ್ಯೇಯಗಳಿಂದ ಗುರುತಿಸಲಾಗುತ್ತಿವೆ. ಕರಾವಳಿಯಲ್ಲಿ ಮುಖ್ಯವಾಗಿ ಬೆಸ್ತರನ್ನು 'ಮೊಗೇರ'ಎಂದು ಹಿಂದಿನ ಕಾಲದಲ್ಲಿ ಕರೆಯುತ್ತಿದ್ದರೆಂದು ವೆಂಕಟರಾಜ ಪುಣಂಚಿತ್ತಾಯ ಅವರ 'ಮೊಗವೀರರು' ಎನ್ನುವ ಪುಸ್ತಕದಿಂದ ತಿಳಿದುಬಂದಿದೆ. ಹಾಗೆಯೇ ಮರಕಾಲ ಎನ್ನುವ ಇನ್ನೊಂದು ಹೆಸರು ಸಹ ಇದೆ. ಮೊಗೇರ, ಮರಕಾಲ ಎಂಬ ಎರಡು ಹೆಸರುಗಳು ಹೋಗಿ ಈಗ ಮೊಗವೀರರು ಎಂಬ ಹೆಸರು ಸಾರ್ವತ್ರಿಕರಣಗೊಂಡಿದೆ. ಮೊಗವೀರರು ಪ್ರಾಚೀನಕಾಲದಿಂದಲೂ ತಮ್ಮ ಜಾತಿಯ ಕುಲಕಸಬಾಗಿ ಮೀನುಗಾರಿಕೆಯನ್ನೇ ನಂಬಿಕೊಂಡಿರುವವರು ಮತ್ತು ಅದರಲ್ಲಿಯೇ ಪಳಗಿದವರು. ಮೀನುಗಾರಿಕೆಗೆ ಮುಖ್ಯವಾಗಿ ಬೇಕಾಗಿರುವುದು ದೋಣಿ ಮತ್ತು ಬಲೆ. ಯಾವುದೇ ಒಂದು ಇಲ್ಲವಾದರೂ ಪ್ರಯೋಜನವಿಲ್ಲ. ಎರಡೂ ಪರಸ್ಪರ ಪೂರಕ ಸಾಧನಗಳು. ಮೊಗವೀರ ಪುರುಷರು ತಮ್ಮ ಸ್ತ್ರೀಯರನ್ನು

ಬಲವಾಗಿ ನಂಬುತ್ತಾರೆ. ಗಂಡು ಗತ್ತಿನಿಂದ ಹಿಂತಿರುಗುವ ತಡ ರಾತ್ರಿಯವರೆಗೂ ಹೆಂಗಸರು ಮನೆಯ ಹೊರಗೆ ದುಡಿಮೆ ಮಾಡುತ್ತಾರೆ. ಅದನ್ನು ಪುರುಷರು ಪ್ರೋತ್ಸಾಹಿಸುತ್ತಾರೆ. ಮಹಿಳೆಯರು ಈ ಭಾಗದಲ್ಲಿ ತಮ್ಮ ದುಡಿಮೆಯ ಮೂಲಕ ಆರ್ಥಿಕ ಭದ್ರತೆ, ಸಾಮಾಜಿಕ ಭದ್ರತೆ, ಕೌಟುಂಬಿಕ ಭದ್ರತೆಯನ್ನು ಯೋಗ್ಯ ರೀತಿಯಲ್ಲಿ ನಿರ್ವಹಣೆ ಮಾಡುತ್ತಾರೆ. ನಿಜವಾಗಿಯೂ ಕರಾವಳಿಯ ಮೊಗವೀರ ಸ್ತ್ರೀಯರು ಉತ್ತಮ ರೀತಿಯಲ್ಲಿ ಕುಟುಂಬದ ನಿರ್ವಹಣೆ ಮಾಡುತ್ತಾರೆ. ಅದನ್ನು ಪುರುಷರು ಒಪ್ಪಿಕೊಂಡಿದ್ದಾರೆ. ಈ ಭಾಗದ ಮನೆಯ ವಡತಿಯನ್ನು ಯಜಮಾನತಿ ಅಥವಾ ಅಕ್ಕ ಎಂದು ಕರೆಯುತ್ತಾರೆ. ಇವಳು ಮನೆಯ ಹಿರಿಯವಳಾಗಿ ತನ್ನ ಸಂಸಾರವನ್ನು ಮುನ್ನಡೆಸಿಕೊಂಡು ಹೋಗುತ್ತಾಳೆ. ಕುಟುಂಬದ ಒಳಿತಿಗಾಗಿ ಶಕ್ತಿ ಮೀರಿ ದುಡಿಯುತ್ತಾಳೆ.

ಕರ್ನಾಟಕದಲ್ಲಿ ೨೦೦೧ರ ಜನಗಣತಿಯ ಪ್ರಕಾರ ಒಟ್ಟು ದುಡಿಮೆಗಾರರ ಸಂಖ್ಯೆ ೨೩೫.೨೨ ಲಕ್ಷ ಇವರಲ್ಲಿ ಮಹಿಳ ದುಡಿಮೆಗಾರರ ಪ್ರಮಾಣ ಶೇ.೩೫.೦೭ ಆದರೆ ರಾಜ್ಯದಲ್ಲಿರುವ ಒಟ್ಟು ದಿನಗೂಲಿ ದುಡಿಮೆಗಾರರ ಸಂಖ್ಯೆ ೬೨.೦೯ ಲಕ್ಷ. ಇವರಲ್ಲಿ ಮಹಿಳಾ ದಿನಗೂಲಿ ದುಡಿಮೆಗಾರರ ಪ್ರಮಾಣ ಶೇ.೧೩೧.೪೪ ಲಕ್ಷ. ಅವರಲ್ಲಿ ಇತರೆ ಮಹಿಳೆಯರ ಪ್ರಮಾಣ ಶೇ. ೪೩.ಆದರೆ ಕೃಷಿಯೆತರ ಚಟುವಟಿಕೆಗಳನ್ನು ತೆಗೆದುಕೊಂಡರೆ ಮಹಿಳಾ ದುಡಿಮೆಗಾರರ ಪ್ರಮಾಣ ಕೇವಲ ಶೇ.೨೪.೨೭ ರಷ್ಟಿದೆ. ಇದರಿಂದ ಸ್ಪಷ್ಟವಾಗುವ ಸಂಗತಿಯೆಂದರೆ ಸಮಾಜದಲ್ಲಿ ಯಾವುದಕ್ಕೆ ಕಡಿಮೆ ಕೂಲಿ ಇರುವುದೂ ಅದು ಮಹಿಳೆಯರಿಗೆ ಮೀಸಲು. ಅಂತಹ ಅನಿವಾರ್ಯತೆಗಳಲ್ಲಿ ಮಹಿಳೆಯು ಕಾರ್ಯ ಸರಿದುಗಿಸಬೇಕಾಗಿದೆ.

ಮನೆಯ ಹೊರಗಿನ ಮನೆಯ ಒಳಗಿನ ಇಬ್ಬಗೆಯ ದುಡಿಮೆಯನ್ನು ಹೆಣ್ಣು ಸರಿದುಗಿಸ ಬೇಕಾಗುತ್ತದೆ. ಮನೆಯ ಒಳಗೂ ಸಹ ಉತ್ಪಾದನ ಚಟುವಟಿಕೆಗಳಲ್ಲಿ ನಾರಿಯರು ತೊಡಗಿಸಿ ಕೊಳ್ಳುತ್ತಾರೆ ಅಮರ್ತ್ಯ ಸೇನ್ ಅವರ ಪ್ರಕಾರ ಮಹಿಳೆಯರ ಮನೆಯ ಒಳಗಿನ ದುಡಿಮೆಯು ಉತ್ಪಾದನ ದುಡಿಮೆಯೂ. ಅನುತ್ಪಾದನ ದುಡಿಮೆಯೂ! ಎಂಬುವ ಗೊಂದಲದಲ್ಲಿ ನಮ್ಮ ಸಮಾಜವಿದೆ ಎಂದು ಹೇಳಿದ್ದಾರೆ. ಮನೆಯಲ್ಲಿ ದುಡಿಮೆ ಮಾಡುವ ಮಹಿಳೆಗೆ ಗೌರವ ಆದರಗಳಿರುವುದಿಲ್ಲ. ಅದನ್ನು ಉತ್ಪಾದನೆ ಎಂದೂ ಗುರುತಿಸಲಾಗುವುದಿಲ್ಲ. ಆದರೆ ಅದು ಸಹ ಉತ್ಪಾದನೆಯೆ ಎಂದು ತಿಳಿಸಿಕೊಡಬೇಕಾಗಿದೆ.

**ಅಧ್ಯಯನದ ಉದ್ದೇಶ**

ಕರಾವಳಿಯ ಮೀನುಗಾರ ಕುಟುಂಬವೊಂದರಲ್ಲಿ, ವರಮಾನ ಮಟ್ಟವು ಆ ಕುಟುಂಬದ ಮಹಿಳೆಯೊಬ್ಬಳು ಮನೆಯ ಹೊರಗೆ ದುಡಿಮೆ ಮಾಡುವುದರಿಂದ ಉತ್ತಮಗೊಳ್ಳುತ್ತದೆ. ವರಮಾನದ ವರ್ಧನೆಗಾಗಿ ಮಹಿಳೆಯರ ಮನೆಯ ಹೊರಗಿನ ದುಡಿಮೆಯ ಒಂದು ಸಾಧನ. ಮೀನುಗಾರ ಕುಟುಂಬದಲ್ಲಿ ಗೃಹಿಣಿಯು ಆಕೆಯ ಮಕ್ಕಳ, ಗಂಡನ, ಮತ್ತು ಕುಟುಂಬದ ಔನ್ನತ್ಯದಲ್ಲಿ ಲೀನವಾಗಿ ಹೋಗಬಾರದೆಂಬ ದೃಷ್ಟಿಯಿಂದ ಹೊರಗಿನ ದುಡಿಮೆಗೆ ಆಕೆಯನ್ನು ಪ್ರೋತ್ಸಾಹಿಸುತ್ತಾರೆ. ಹೀಗೆ ಧಾರಣ ಸಾಮರ್ಥ್ಯ ಸಂಬಂಧಿ

ದೃಷ್ಟಿಕೋನವು ನೀಲಿ– ನಿರೂಪಣೆಯ ದೃಷ್ಟಿಯಿಂದ ಹೆಚ್ಚು ಉಪಯುಕ್ತವಾದುದು. ಮೋಗವೀರ ಮಹಿಳೆಯರ ದುಡಿಮೆಯಲ್ಲಿ ಸಾಮಾನತೆಯನ್ನು ಮೀನು ಮಾರಾಟ ಕ್ಷೇತ್ರದಲ್ಲಿ ನೋಡಬಹುದು.

ಬೆಸ್ತರ ಮಹಿಳೆಯರಿಗೆ ಮೊಗವಿರ್ತಿ, ಮರಕಾಲ್ತಿ, ಮೊಗೆರ್ತಿ, ಪಟ್ಣಂತ್ತಿ, ಬೋವೆರ್ತಿ, ನಾಯಿತ್ತಿ(ನಾಯಕನ ಮಡದಿ) ಗಂಗಾಮತಸ್ಥೆ, ಅಂಬಿಗೆ, ಬೊರ್ವೆತ್ತಿ ನಾನ ಹೆಸರಿನಿಂದ ಗುರುತಿಸುತ್ತಾರೆ. ಕೆಲವು ಮೋಗವೀರ ಮಹಿಳೆಯರು ತಮ್ಮ ಪರಂಪರೆಯ ಮೀನು ಮಾರಾಟವನ್ನು ತ್ಯಜಿಸಿ, ಕೃಷಿವೃತ್ತಿ ಗೇರುಬೀಜದ ಕಾರ್ಖಾನೆಗಳಲ್ಲಿ, ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡಿಕೊಂಡಿದ್ದಾರೆ. ಮೋಗವೀರ ಮಹಿಳೆಯರು ಪ್ರಾಮಾಣಿಕರು ಧೈರ್ಯವಂತರಾಗಿದ್ದಾರೆ. ಮೊಗವೀರ ಮಹಿಳೆಯರು ಮೀನು ಮಾರಾಟ ಮಾಡುವುದರಲ್ಲಿ ಪ್ರವೀಣರು. ಅವರ ಮೀನುಗಾರಿಕೆಯ  ಚಾತುರ್ಯಕ್ಕೆ ಎಂತಹ ಜಿಪುಣ ಗ್ರಾಹಕನು ವ್ಯಾಪಾರ ಮಾಡಿ ಹೋಗುತ್ತಾನೆ. ಅವರ ಭಾಷಾ ಚಾತುರ್ಯತೆ ಮತ್ತು ಕಾರ್ಯದಕ್ಷತೆ ಮೆಚ್ಚುವಂತದ್ದು. ಮುಖ್ಯ ವಾಹಿನಿಯಲ್ಲಿರುವ ಹೆಚ್ಚಿನ ಸಮುದಾಯಗಳಿಗೆ ಹೊಲಿಸಿದರೆ ನಮ್ಮ ಮಹಿಳೆಯರು ತುಂಬಾ ಅಭಿವೃದ್ಧಿ ಹೊಂದಿದ್ದಾರೆಂದು ಹೇಳಬಹುದು. ಕರಾವಳಿ ಮೀನುಗಾರ ಮಹಿಳೆಯರ ಶ್ರಮ, ದುಡಿಮೆ ಮತ್ತು ಸಮಾನತೆಯನ್ನು ಅನುಸರಣೆಯ ಅಂಶವೆಂದು ಪರಿಗಣಿಸಿಜನತೆಗೆ ಹೇಳುವುದೇ ಈ ಅಧ್ಯಯನದ ಉದ್ದೇಶವಾಗಿದೆ.

ತುಳುನಾಡಿನ ಮೊಗವೀರ ಮಹಿಳೆಯರು ಮತ್ಸ್ಯೋದ್ಯಮದಲ್ಲಿ ತೊಡಗಿಸಿಕೊಂಡು ಪ್ರಗತಿ ಸಾಧಿಸಿದ್ದಾರೆ. ಇಲ್ಲಿಯ ಅನೇಕ ಸ್ತ್ರೀಯರು ಮೀನುಗಾರಿಕೆ ಮತ್ತು ಸಂಸ್ಕರಣ ಕೈಗಾರಿಕೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪುರುಷರಿಗಿಂತ ಅಧಿಕ ಸಂಖ್ಯೆಯಲ್ಲಿ ಮಹಿಳೆಯರೇ ತೊಡಗಿಸಿಕೊಂಡಿದ್ದಾರೆ. ಜಿಲ್ಲಾ ಮೊಗವೀರ ಮಹಾಜನ ಸಂಘದ ಅಧಿಕೃತ ಹೇಳಿಕೆಯಂತೆ ಸದ್ಯಕ್ಕೆ ಜಿಲ್ಲೆಯಲ್ಲಿ ೨.೫.ಲಕ್ಷದಷ್ಟು ಜನ ಮೊಗವೀರ ಸ್ತ್ರೀಯರಿದ್ದಾರೆ ಎನ್ನಲಾಗಿದೆ. ಮೊಗವೀರ ಮಹಿಳೆಯರು ಪುರುಷರಿಗಿಂತ ಅಧಿಕ ಸಂಖ್ಯೆಯಲ್ಲಿ ದುಡಿಮೆ ಮಾಡುತ್ತಿದ್ದಾರೆ. ಹೆಚ್ಚಿನವರು ಮೀನು ಸಂಸ್ಕರಣ ಘಟಕದಲ್ಲಿ ಕೆಲಸ ಮಾಡಿಕೊಂಡಿದ್ದಾರೆ ಹಾಗೂ ಈಗ ಸುಮಾರು ೫೦ ರಿಂದ ೬೦% ಹೆಂಗಸರು ಮೀನುಗಾರಿಕೆಯ ಘಟಕಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಕಡಲಿನಿಂದ ಮೀನುಗಳನ್ನು ಬೇದಿಸಿ ಹಿಡಿದು ತಂದು ಪ್ರಾಂಗಣಕ್ಕೆ ಸುರಿಯುವ ಕೆಲಸವನ್ನು ಗಂಡಸರು ಮಾಡುತ್ತಾರೆ. ಮಧ್ಯವರ್ತಿಗಳಿಗೆ ಹರಾಜು ಹಾಕುವ ಜವಾಬ್ದಾರಿಯನ್ನು ಮಂಡಳಿ ನೀಡಿರುತ್ತದೆ. ಹರಾಜು ಕೂಗುವಾಗ ಆಸಕ್ತರು ಅದನ್ನು ಖರೀದಿಸಿ ವಾಹನಗಳ ಮೂಲಕ ಮಾರುಕಟ್ಟೆಗೆ ತೆಗೆದುಕೊಂಡು ಹೋಗುತ್ತಾರೆ. ನಿರ್ದಿಷ್ಟ ಸ್ಥಳಕ್ಕೆ ಸಾಗಿಸುವುದು, ಕ್ಯಾರಿಯರ್ ಬೋಟು ತಂದ ಮೀನನ್ನು ಹೆಂಗಸರು ಬುಟ್ಟಿಯಲ್ಲಿ ಹೊತ್ತುಕೊಂಡು ಪ್ರಾಂಗಣಕ್ಕೆ ಸುರಿಯುತ್ತಾರೆ. ಈ ಹಂತದಲ್ಲಿ ನಮ್ಮ ಕರಾವಳಿಯ ಮೊಗವೀರ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಸುರಿದ ಮೀನುಗಳನ್ನು ದಲ್ಲಾಳಿಗಳು ಬೇರೆ ಬೇರೆ ಸ್ಥಳಗಳಿಗೆ ವರ್ಗಾವಣೆ ಮಾಡುತ್ತಾರೆ. ಈ ಕ್ರಿಯೆಯಲ್ಲಿ ಸಾವಿರಾರು ಮಹಿಳೆಯರು ಕೆಲಸ ಮಾಡುತ್ತಾರೆ. ಬೇರೆ ಬೇರೆ

ಪಾಲು ಮಾಡಿ ಎಲಂ ಕೂಗುತ್ತಾರೆ. ಮಾಲೀಕರು ಮೀನುಗಳನ್ನು ಖರೀದಿಸಿ ವಾಹನಗಳಿಗೆ ಹಾಕುತ್ತಾರೆ. ಅನೇಕ ಮಹಿಳೆಯರು ಕೂಲಿಗಾಗಿ ಬುಟ್ಟಿಯಲ್ಲಿ ಹೊತ್ತು ವಾಹನಗಳಿಗೆ ಹಾಕುವ ಕೆಲಸ ಮಾಡುತ್ತಾರೆ. ನಂತರ ವಾಹನಗಳು ಮಾರುಕಟ್ಟೆಗೆ ಮೀನನ್ನು ಕೊಂಡ್ಯೊಯುತ್ತವೆ. ಮಹಿಳೆಯರಿಗೆ ಅಚ್ಚುಮೆಚ್ಚಿನ ಕೆಲಸ ಮೀನು ವಿಂಗಡನೆ ಮಾಡುವುದು ಇದರಲ್ಲಿ ಅತೀ ಹೆಚ್ಚಿನ ಪ್ರಾವಿಣ್ಯತೆ ಇವರಿಗಿದೆ. ಮೀನುಗಾರರು ಎಲ್ಲಾ ಜಾತಿಯ ಮೀನುಗಳನ್ನು ಹಿಡಿದು ತಂದು ಪ್ರಾಂಗಣಕ್ಕೆ ಸುರಿಯುತ್ತಾರೆ. ಅದರೆ ಜಾತಿಗನುಗುಣವಾಗಿ ವಿಂಗಡನೆ ಮಾಡಬೇಕು. ಪರಿ ಪರಿಯಾಗಿ ಮೀನುಗಳನ್ನು ವಿಂಗಡನೆ ಮಾಡುವ ಕೆಲಸವನ್ನು ಮಹಿಳೆಯರು ನಿರ್ವಹಿಸುತ್ತಾರೆ. ವಿಂಗಡಿಸಿದ ಮೀನುಗಳನ್ನು ಬೇರೆ ಬೇರೆಯಾಗಿ ರಾಶಿ ಹಾಕಿದ ಮೇಲೆ ದಲ್ಲಾಳಿಗಳು ಖರೀದಿಸುತ್ತಾರೆ. ಮೀನನ್ನು ಖರೀದಿಸಿ ಪಾಲುದಾರರು ಖಾಸಗಿ ವಾಹನಗಳಲ್ಲಿ ತಂದು ಮಾರುಕಟ್ಟೆಗೆ ಇಳಿಸುತ್ತಾರೆ. ಮಹಿಳೆಯರು ಮೀನುಗಳನ್ನು ತೆಗೆದುಕೊಂಡು ವಿವಿಧ ವಿಧಾನಗಳನ್ನು ಅನುಸರಿಸಿ ಮೀನು ಮಾರಾಟ ಮಾಡುತ್ತಾರೆ. ಬೆಳಗ್ಗೆ ಪ್ರಾಂತ್ಯಕಾಲದಲ್ಲಿ ಮನೆಯ ಕೈಂಕಾರ್ಯಗಳನ್ನು ಮುಗಿಸಿ ತುಳುನಾಡಿನ ಮಹಿಳೆಯರು ವ್ಯಾಪಾರಕ್ಕೆ ಹೊರಡುತ್ತಾರೆ. ತಮಗೆ ಹೊರಲು ಸಾಧ್ಯವಾದಷ್ಟು ಮೀನುಗಳನ್ನು ಮಾತ್ರ ಬುಟ್ಟಿಯಲ್ಲಿ ಹೊತ್ತುಕೊಂಡು ಊರುಕೇರಿಗಳಲ್ಲಿ ಮನೆ ಮನೆಗೆ ಹೋಗಿ ಮಾರಾಟ ಮಾಡುತ್ತಾರೆ. ಸುಮಾರು ದಿನಕ್ಕೆ ೮ರಿಂದ ೧೦ ಕಿ.ಮೀ. ಕಾಲು ನಡಿಗೆಯಲ್ಲಿಯೇ ಕ್ರಮಿಸುತ್ತಾರೆ. ತಮಗೆ ಆಗುವ ದೈಹಿಕ ಶ್ರಮವನ್ನು ನಿವಾರಣೆ ಮಾಡಿಕೊಳ್ಳಲು ಅಲ್ಲಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ. ಇವರು ಜನರ ಬೇಡಿಕೆಯ ಮೀನುಗಳನ್ನು ತೆಗೆದುಕೊಂಡು ಹೋಗುತ್ತಾರೆ. ಅವರು ಪ್ರೀತಿ ವಿಶ್ವಾಸ, ಅಪಾರವಾದ ನಂಬಿಕೆ ಹೇಗಿರುತ್ತದೆ ಅಂದರೆ ಆ ನಿರ್ದಿಷ್ಟ ಹೆಂಗಸನ್ನು ಬಿಟ್ಟು ಬೇರೆಯಾರಿಂದಲೂ ಮೀನು ತೆಗೆದುಕೊಳ್ಳುವುದಿಲ್ಲ. ಒಂದು ವೇಳೆ ತೆಗೆದುಕೊಂಡರು ಅದು ತುರ್ತು ಪರಿಸ್ಥಿತಿಗಷ್ಟೆ. ಈ ಗರತಿಯರಿಗೇ ಅವರ ಮಾತಿನ ಚಾತುರ್ಯವೇ ಸಂಪತ್ತು. ಬುಟ್ಟಿ ಖಾಲಿಯಾದ ಮೇಲೆ ಮನೆಗೆ ಹಿಂದಿರುಗುತ್ತಾರೆ. ಹಿಂದಿನ ಕಾಲದಲ್ಲಿ ಈ ಗ್ರಾಮದ ಮಹಿಳೆಯರು ದೂರದ ಘಟ್ಟ ಪ್ರದೇಶಗಳಿಗೆ ಅಂದರೆ ತೀರ್ಥಹಳ್ಳಿ, ಸಾಗರದವರೆಗೂ ಮೀನುಗಳನ್ನು ಬುಟ್ಟಿಯಲ್ಲಿ ಹೊತ್ತುಕೊಂಡು ಮಾರಾಟ ಮಾಡಿ ಬರುತ್ತಿದ್ದರು. ಇದು ಸಾಕಷ್ಟು ದಿನಗಳನ್ನು ತೆಗೆದುಕೊಳ್ಳುತ್ತಿತ್ತು. ದಾರಿ ಮಧ್ಯದಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ಅಲ್ಲಲ್ಲಿ ಪರಿಚಿತರ ಮನೆಗಳು ಇರುತ್ತಿದ್ದವು. ಇಂಥ ಸಾಹಸಿ ಮಹಿಳೆಯರ ಬದುಕನ್ನು ಪರಿಚಯಿಸುವುದೂ ಈ ಪ್ರಬಂಧದ ಉದ್ದೇಶವಾಗಿದೆ. ಆಧುನಿಕ ಯುಗದಲ್ಲಿ ಸರ್ಕಾರವು ಮೀನು ಹದ ಮಾಡುವ ಕೇಂದ್ರಗಳನ್ನು ಸ್ಥಾಪಿಸಿದೆ. ಈ ಕೇಂದ್ರಗಳು ದಕ್ಷಿಣ ಕನ್ನಡ ಜಿಲ್ಲೆಯ ಉಳ್ಳಾಲ, ಮಂಗಳೂರು, ಬೆಂಗ್ರೆ, ಬೊಕ್ಕೆಂಪಾಡಿ, ಕುಲ್ಯೆ, ಹೊಸಬೆಟ್ಟು, ಮುಧ್ವಿ, ಕಾಪು, ಉದ್ಯಾವರ, ಮಲ್ಪೆ, ಹಂಗಾರಕಟ್ಟೆ, ಗಂಗೊಳ್ಳಿ, ಮರವಂತೆ, ಕಿರಿಮಂಜೇಶ್ವರ, ತಾರಪತ್ತಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಸ್ಥಾಪಿಸಿದೆ. ಮೊಗವೀರ ಹೆಂಗಸರು ಅನೇಕ ಮೀನು ಸಂಸ್ಕರಣ ಘಟಕಗಳಲ್ಲಿ ಕಾರ್ಯನಿರ್ವಹಿಸುತ್ತಾರೆ. ಈ ಸಂಸ್ಕರಣ ಘಟಕಗಳು ಖಾಸಗಿ ಒಡೆತನಕ್ಕೆ ಬರುತ್ತೆವೆ. ಹೆಚ್ಚಿನ ಮಾಲೀಕರು ಮೊಗವೀರರೇ ಆಗಿರುತ್ತಾರೆ. ಹತ್ತಾರು ಘಟಕಗಳು ಈ ಭಾಗದಲ್ಲಿ ಕೆಲಸ ಮಾಡಿಕೊಂಡು ಬಂದಿದೆ. ಸಾವಿರಾರು ಮಹಿಳೆಯರು ತಮ್ಮ

ದುಡಿಮೆ ಅಂಗಳವಾಗಿಸಿಕೊಂಡಿದ್ದಾರೆ. ಇಲ್ಲಿ ಇವರಿಗೆ ಯೋಗ್ಯ ರೀತಿಯ ಸಂಬಳ ಮತ್ತು ಪಿಎಫ್ ಸಹ ಸರ್ಕಾರದ ಯೋಜನೆ ರೂಪದಲ್ಲಿ ಸಿಗುತ್ತವೆ. ಮೀನುಗಳನ್ನು ಸಂಸ್ಕರಣೆ ಮಾಡುವುದರಲ್ಲಿ ಮಹಿಳೆಯರು ಚಾತುರ್ಯರು. ಇವರು ನಿರ್ವಹಿಸುವ ಅನೇಕ ಕೆಲಸಗಳನ್ನು ಗಂಡಸರು ನಿರ್ವಹಿಸಲು ಸಾಧ್ಯವಿಲ್ಲ. ತುಂಬಾ ಆತ್ಮೀಯತೆಯಿಂದ ಹೆಚ್ಚು ಬುದ್ಧಿವಂತಿಕೆಯಿಂದ ದುಡಿಮೆ ಮಾಡುತ್ತಾರೆ. ಬೆಳಗ್ಗೆಯಿಂದ ಸಾಯಂಕಾಲದವರೆಗೂ ಹಾಗೂ ಅನಿವಾರ್ಯತೆ ಬಿದ್ದರೆ ರಾತ್ರಿಯಲ್ಲಿ ಕೆಲಸಗಳನ್ನು ಮಾಡಿಕೊಂಡಿರುತ್ತಾರೆ. ಆಧುನಿಕತೆಯೂ ಈ ಮೀನುಗಾರಿಕಾ ಕ್ಷೇತ್ರಕ್ಕೆ ಕಾಲಿಟ್ಟಿರುವುದು ನಮಗೆ ಗೊತ್ತಿರುವ ವಿಚಾರವೇ. ಮೀನು ಸಂಸ್ಕರಣ ಘಟಕಗಳಲ್ಲಿ ನವೀಕೃತ ಯಂತ್ರಗಳನ್ನು ನಾವು ನೋಡಬಹುದಾಗಿದೆ. ಈ ಯಂತ್ರಗಳನ್ನು ಉಪಯೋಗಿಸುವುದರಲ್ಲಿ ಮಹಿಳೆಯರು ನಿಪುಣರು. ಸಂಸ್ಕರಣೆಯ ಪ್ರಾಥಮಿಕ ಕೆಲಸದಿಂದ ಹಿಡಿದು ವಿನಿಮಯದವರೆಗೂ ಸ್ತ್ರೀಯರು ದುಡಿಯುತ್ತಾರೆ. ಆಧುನಿಕ ಆವಿಷ್ಕಾರಗಳಿಗೂ ಹೊಂದಿಕೊಂಡ ಈ ಮಹಿಳೆಯರು ಪುರುಷರನ್ನು ಮೀರಿಸುವ ನೈಪುಣ್ಯ ತೋರಿಸುತ್ತದೆ. ಇಂಥ ಬದಲಾವಣೆಯನ್ನು ಗಮನಿಸುವುದೂ ಈ ಪ್ರಬಂಧದ ಉದ್ದೇಶವಾಗಿದೆ. ಕುಟುಂಬದಲ್ಲಿ ಮಹಿಳೆ ತನ್ನ ನಿರಂತರ ದುಡಿಮೆಯ ಮೂಲಕ ಮುಖ್ಯಸ್ಥಾನದಲ್ಲಿದ್ದಾಳೆ. ಮನೆಯ ಯಜಮಾನತಿ ಅಥವಾ ಅಕ್ಕ ಎಂಬ ಪದ ಬಳಕೆಯಲ್ಲಿದೆ. ಇದಕ್ಕೆ ಕಾರಣ ಹೆಣ್ಣು ಮನೆಯ ಆರ್ಥಿಕತೆಯ ಮೂಲಕಾರಣಿಕಗಳಾಗುತ್ತಾಳೆ. ಮನೆಯಲ್ಲಿ ನಡೆಯುವ ಎಲ್ಲಾ ಜವಾಬ್ದಾರಿಗಳನ್ನು ಅವಳೇ ಹೊರುತ್ತಾಳೆ. ಜೊತೆಗೆ ಹೊರಗಿನ ದುಡಿಮೆಯನ್ನು ಕೂಡ ಮಾಡಿಕೊಳ್ಳುತ್ತಾಳೆ. ತನ್ನ ವಿಶೇಷವಾದ ಕೌಶಲ್ಯಗಳಿಂದ ಮನೆಯನ್ನು ನಿರ್ವಹಣೆ ಮಾಡುತ್ತಾಳೆ. ಒಂದು ಮನೆಯೊಳಗೆ ಸಾವಿರಾರು ತಾಪತ್ರ್ಯಗಳು ಇರುತ್ತವೆ. ನೂರಾರು ವಿಘ್ನಗಳು ಬರುತ್ತದೆ. ಅವನ್ನೆಲ್ಲಾ ಹಿಮ್ಮೆಟ್ಟಿ ಮುಂದೆ ಸಾಗುತ್ತಾಳೆ. ತುಂಬ ಚಾಕಚಕ್ಯತೆಯಿಂದ ಗಂಡ, ಮಕ್ಕಳು, ಹಿರಿಯರು, ಬಂಧುಗಳು, ಇತರರ ಜೊತೆಗೆ ವ್ಯವಹಾರ ಮಾಡುತ್ತಾ ಅವರ ಎಲ್ಲಾ ಬೇಕು ಬೇಡಗಳನನ್ನು ಪೂರೈಸಿಕೊಂಡು, ದೈನಂದಿನ ವ್ಯವಹಾರ, ಹಬ್ಬ, ಮದುವೆ, ಧಾರ್ಮಿಕ ಕಾರ್ಯಕ್ರಮಗಳು ಎಲ್ಲವನ್ನೂ ನಿಭಾಯಿಸುತ್ತಾಳೆ. ಮಕ್ಕಳ ಶಿಕ್ಷಣ, ಸಂಘ-ಸಂಸ್ಥೆಗಳಲ್ಲಿ ಭಾಗವಹಿಸುವಿಕೆಯನ್ನು ನಮ್ಮ ಗ್ರಾಮಗಳಲ್ಲಿ ನಾವು ಕಾಣಬಹುದಾಗಿದೆ. ಬೆಳಿಗ್ಗೆ ಎದ್ದು ಮನೆಯ ಕೆಲಸಗಳು, ಗಂಡನ ಸೇವೆ ಮತ್ತು ಮಕ್ಕಳ ಸೇವೆ, ಹಿರಿಯರ ಸೇವೆಯನ್ನು ಮುಗಿಸಿ ವ್ಯವಹಾರಕ್ಕೆ ಹೋಗಬೇಕು. ಎಲ್ಲಾ ಹೆಣ್ಣುಮಕ್ಕಳ ಮುಖ್ಯವಾದ ಜವಾಬ್ದಾರಿ ಮನೆಯ ನಿರ್ವಹಣೆಯಾಗಿರುತ್ತದೆ. ಹಾಗೆಯೇ ಹೆಂಗಸರು ಇವುಗಳನ್ನು ನಿಭಾಯಿಸಿ ದುಡಿಮೆ ಮಾಡಲು ಹೋಗುತ್ತಾರೆ. ಸಂಜೆ ಬಂದು ಮನೆಯ ಎಲ್ಲಾ ಕೆಲಸಗಳನ್ನು ನಿಭಾಯಿಸುತ್ತಾರೆ. ಮನೆಯ ಸಣ್ಣಪುಟ್ಟ ವಿಪತ್ತುಗಳನ್ನು ಮಹಿಳೆಯರು ನಿರ್ವಹಣೆ ಮಾಡುತ್ತಾರೆ. ಮನೆಯಲ್ಲಿ ಆಗುವ ಮದುವೆ, ಗೃಹಪ್ರವೇಶ, ಬಯಕೆ, ಬಾಣಂತನ, ಮಗು ಜನನ, ನಾಮಕರಣ, ಮಕ್ಕಳ ಪೋಷಣೆ, ವಿದ್ಯಾಭ್ಯಾಸ, ಹೆಣ್ಣುಮಕ್ಕಳಾದರೆ ಋತುಮತಿ, ಗಂಡು ನೋಡುವುದು, ಮದುವೆ, ಇನ್ನಿತರ ಕಾರ್ಯಕ್ರಮಗಳು ಹಾಗೂ ವಾರ್ಷಿಕ ಆಚರಣೆಗಳು ಹಬ್ಬಗಳು, ಜನ್ಮದಿನ, ಇನ್ನಿತರ ವಿಶೇಷ ದಿನಾಚರಣೆಗಳನ್ನು ಮಹಿಳೆಯರೇ ನಿಭಾಯಿಸಿಕೊಂಡು ಉತ್ತಮವಾಗಿ ಬದುಕುತ್ತಿದ್ದಾರೆ. ಒಂದು ಹೆಣ್ಣು ಪರಿಪೂರ್ಣವಾಗಬೇಕಾದರೆ ಮಕ್ಕಳು

ಇರಲೇಬೇಕು. ಮಕ್ಕಳ ಜೀವನ ಉತ್ತಮವಾಗಬೇಕಾದರೆ ಅವರಿಗೆ ಸೂಕ್ತ ರೀತಿಯ ಶಿಕ್ಷಣದ ಅವಶ್ಯಕತೆ ಇರುತ್ತದೆ. ಇದನ್ನು ಮೊಗವೀರ ಮಹಿಳೆಯರು ಅರ್ಥ ಮಾಡಿಕೊಂಡಿದ್ದಾರೆ. ಮಕ್ಕಳ ಶಿಕ್ಷಣದ ಮಟ್ಟ ಉನ್ನತ ಮಟ್ಟದಲ್ಲಿದೆ. ಅದಕ್ಕೆ ಕಾರಣ ಆ ಭಾಗದ ತಾಯಂದಿರು  ಯೋಗ್ಯ ರೀತಿಯಲ್ಲಿ ಕಾಳಜಿ ವಹಿಸುತ್ತಾರೆ. ಶಾಲಾ ಕಾಲೇಜುಗಳಿಗೆ ಪದೇ ಪದೇ ಭೇಟಿ ನೀಡುತ್ತಾರೆ. ಪೋಷಕ–ರಕ್ಷಕ ಸಭೆಗಳನ್ನು ತಪ್ಪದೇ ಭಾಗವಿಸುತ್ತಾರೆ. ಉತ್ತಮವಾದ ಮುತುವರ್ಜಿವಹಿಸಿ ಮನೆಯಲ್ಲಿ ಶಾಂತಿ ಹಾಗೂ ಓದಲು ಅವಕಾಶ ಸಣ್ಣಪುಟ್ಟ ಕಾರ್ಯಕ್ರಮಗಳಿಗೆ ಗೈರು ಹಾಜರಾಗದಂತೆ ನೋಡಿಕೊಳ್ಳುತ್ತಾರೆ. ಮಕ್ಕಳಿಗೆ ಸಿಗುವ ಸಣ್ಣಪುಟ್ಟ ಕಾರ್ಯಕ್ರಮಗಳು ವಿವಿಧ ಲಲಿತಕಲೆಗಳು, ಯಕ್ಷಗಾನ, ಸಾಹಿತ್ಯ ಪ್ರಕಾರಗಳು ಮುಂತಾದವುಗಳಿಗೆ ತಾಯಂದಿರು ಪ್ರೋತ್ಸಾಹ ನೀಡುತ್ತಾರೆ. ಈ ರೀತಿಯಾಗಿ ಮಕ್ಕಳ ವಿದ್ಯಾಭ್ಯಾಸದ ನಿರ್ವಹಣೆ ಮಾಡುತ್ತಾರೆ. ಮಕ್ಕಳ ಕಾರ್ಯಕ್ರಮಗಳಲ್ಲಿ ತಾವು ಭಾಗವಹಿಸುವುದರಿಂದ ಅವರಿಗೆ ಉತ್ತೇಜನ ಸಿಕ್ಕಿದಂತಾಗುತ್ತದೆ. ಮೊಗವೀರ ಮಹಿಳೆಯರು ಮುಂದೆ ಬರುವ ವಿಪತ್ತುಗಳಿಗೆ ಪ್ರಾರಂಭದಿಂದಲೇ ಸ್ವಲ್ಪ ಸ್ವಲ್ಪ ಕೂಡಿಡುವ ಪರಿಪಾಠ ಇಟ್ಟುಕೊಂಡಿರುತ್ತಾರೆ. ಹೆಂಗಸರ ಮೊದಲನೇ ಉಳಿತಾಯ ಸಂಗ್ರಹಣೆಯ ಆರಂಭ ಬಟ್ಟೆಯ ಪೆಟ್ಟಿಗೆ, ಅಡುಗೆ ಮನೆಯಲ್ಲಿರುವ ಸಾಮಾನುಗಳ ಪೆಟ್ಟಿಗೆಗಳಿಂದ ಪ್ರಾಥಮಿಕವಾಗಿ ಮಾಡುತ್ತಾರೆ. ನಂತರ ಪಕ್ಕದ ಮನೆಯ ಗೆಳತಿಯಲ್ಲಿ, ಆ ಮೇಲೆ ಕಂತುದಾರರಲ್ಲಿ, ಪೋಸ್ಟ್‌ಗಳಲ್ಲಿ, ಬ್ಯಾಂಕುಗಳಲ್ಲಿ, ಮಕ್ಕಳ ಹಳೆಯ ಪುಸ್ತಕಗಳಲ್ಲಿ ಉಳಿತಾಯ ಸಂಗ್ರಹಣೆ ಮಾಡುತ್ತಾರೆ. ಮೊಗವೀರ ಹೆಂಗಸರು ಬ್ಯಾಂಕುಗಳಲ್ಲಿ ವ್ಯವಹಾರ ಮಾಡುವುದನ್ನು ಬಲ್ಲರು ಈ ಭಾಗದಲ್ಲಿರುವ ರಾಷ್ಟ್ರೀಕೃತ ಬ್ಯಾಂಕುಗಳಿಗೆ  ಹೋಗಿ ಮೀನು ಮಾರಾಟದಲ್ಲಿ ಬಂದ ಹಣವನ್ನು ಮನೆಯ ನಿರ್ವಹಣೆಯನ್ನು ಮಾಡಿ ಉಳಿದ ಹಣವನ್ನು ಬ್ಯಾಂಕಿನಲ್ಲಿಡುತ್ತಾರೆ. ಇಲ್ಲಿನ ವಿಶೇಷವೆಂದರೆ ಮೀನು ಮಾರಾಟ ಮಾಡುತ್ತಿರುವ ಎಲ್ಲಾ ಮಹಿಳೆಯರಿಗೆ ಬ್ಯಾಂಕ್ ಖಾತೆ ಇರುತ್ತದೆ. ಇದೊಂದು ಉತ್ತಮವಾದ ಬೆಳವಣಿಗೆಯಾಗಿದೆ. ಅನೇಕ ಸಂಘಗಳು ಇವೆ. ಇದರಲ್ಲಿ ಹೆಚ್ಚಿನ ಮಹಿಳೆಯರು ಸದಸ್ಯರಾಗಿರುತ್ತಾರೆ. ಸ್ತ್ರೀಶಕ್ತಿ ಸಂಘ ಇದು ಹಳೆಯ ಯೋಜನೆಯಾದರೂ ಇಂದಿಗೂ ಜೀವಂತವಾಗಿದೆ. ಇದರೊಂದಿಗೆ, ಮೊಗವೀರ ಮಹಿಳಾ ಸಂಘ, ಸಹಕಾರ ಬ್ಯಾಂಕ್‌ಗಳು ಮುಂತಾದವುಗಳಲ್ಲಿ ಸಾಲದ ನಿರ್ವಹಣೆ, ವ್ಯವಹಾರಗಳನ್ನು ಮಾಡಿಕೊಳ್ಳುತ್ತಾರೆ. ಬ್ಯಾಂಕುಗಳಿಂದ ಸಂಘ–ಸಂಸ್ಥೆಗಳಿಂದ ಸಾಲದ ನೆರವು, ಸಾಲದ ನಿರ್ವಹಣೆ ಉತ್ತಮವಾಗಿರುತ್ತದೆ. ಇವುಗಳು ನೀಡುವ ಸಾಲಗಳೆಂದರೆ ಮೀನುಗಾರರ ಸಾಲ, ಮೀನುಗಾರಿಕೆ ಮನೆ ಸಾಲ, ಶೈಕ್ಷಣಿಕ ಸಾಲ, ಕೌಶಲ್ಯ ತರಬೇತಿಗಳಿಗಾಗಿ ಸಾಲ ಮುಂತಾದವು. ಮೀನುಗಾರರಿಗಾಗಿ ಸಹಕಾರಿ ಸಂಘಗಳನ್ನು ಸುಮಾರು ೫೦ ವರ್ಷ ಮುಂಚೆಯೇ ಸ್ಥಾಪಿಸಿದ್ದಾರೆ. ಇವುಗಳು ಮಹಿಳೆಯರಿಗಾಗಿ ಕೆಲವೊಂದು ಸಂಘಗಳನ್ನು ಯೋಜನೆಗಳನ್ನು ರೂಪಿಸಿದೆ. ಮೀನುಗಾರಿಕೆ ಮಹಿಳೆಯರು ತಮ್ಮದೇ ಆದ ಸಹಕಾರ ಸಂಘಗಳನ್ನು ಸ್ಥಾಪಿಸಲು ಸಹಾಯಧನ ನೀಡಲಾಗುತ್ತಿತ್ತು. ಮೊಟ್ಟ ಮೊದಲಿಗೆ ಮಲ್ಪೆಯಲ್ಲಿ ಪ್ರಥಮ ಮೀನುಗಾರ ಮಹಿಳೆಯರ ಸಹಕಾರ ಸಂಘವು ೧೯೭೮ರಲ್ಲಿ ಸ್ಥಾಪಿಸಲಾಯಿತು. ಇದರಲ್ಲಿ ೨೦ ಮಹಿಳಾ ಮೀನುಗಾರರ ಸಹಕಾರಿ ಸಂಘಗಳಿಗೂ ಕೊಡಲು ಅನುವು ಮಾಡಲಾಯಿತು. ಮಹಿಳಾ

ಸಹಕಾರಿ ಸಂಘಗಳ ಸದಸ್ಯರಿಗೆ ಮೀನು ವ್ಯಾಪಾರಕ್ಕೆ ಬೇಕಾಗುವ ಮೂಲಧನ, ಮೀನು ಮಾರಾಟಕ್ಕೆ ಬೇಕಾಗುವ ಸಲಕರಣೆಗಳನ್ನು ಕೊಳ್ಳಲು ಸಾಲ, ಮೀನು ಹದ ಮಾಡುವುದಕ್ಕೆ ಸಾಲ ನೀಡಿಕೆಯಾಗಿದೆ. ಇದರಲ್ಲಿ ಸಾಕಷ್ಟು ಮಹಿಳೆಯರು ದುಡಿಮೆಯ ಹಣವನ್ನು ಉಳಿತಾಯ ಮಾಡಿದ್ದಾರೆ. ಹೀಗೆ ಆಧುನಿಕ ಆರ್ಥಿಕಸಹಕಾರ ತತ್ವಗಳನ್ನು ಅರ್ಥ ಮಾಡಿಕೊಂಡು ಮಹಿಳೆಯರು ಪುರುಷರಿಗೆ ಸಮಾನವಾಗಿ ತೊಡಗಿಸಿಕೊಂಡಲ್ಲಿ ಹೇಗೆ ಸಾಧ್ಯವಾಗುತ್ತದೆ ಎಂಬುದನ್ನು ಮನಗಾಣಿಸುವುದು ಕೂಡಾ ಅಧ್ಯಯನದ ಉದ್ದೇಶವಾಗಿದೆ.

ನಿತ್ಯಾಶ್ರಮ ಜೀವಿಗಳಾದ ಮೊಗವೀರ ಗರತಿಯರು ದೈನಂದಿನ ಚಟುವಟಿಕೆಯ ಮೂಲಕ ಸಮಾಜಕ್ಕೆ ಮಾದರಿಯಾಗಿ ಬದುಕುತ್ತಿರುವುದು ನಮ್ಮೆಲ್ಲರಿಗೂ ಗೊತ್ತಿರುವ ವಿಷಯ. ಮೀನಿನ ಗುಣ ಸ್ವಭಾವಗಳ ಬಗ್ಗೆ ಸಾಕಷ್ಟು ಅಧ್ಯಯನ ಮಾಡಿರುವ ಮೊಗವೀರ ಗರತಿಯರು ಸಮಾಜದಲ್ಲಿಯೂ ಹೇಗಿರಬೇಕು ಎಂಬುವ ಸ್ವಾರಸ್ಯವನ್ನು ಬಲ್ಲರು. ಅವಿರತವಾದ ಶ್ರಮ ಜೀವನ ಅವರಿಗೆ ಹೆಸರನ್ನು ಕೊಟ್ಟಿದೆ. ಸಮಾಜದಲ್ಲಿ ಉತ್ತಮ ಸ್ಥಾನಮಾನವೂ ಸಿಕ್ಕಿದೆ. ಒಂದು ಇಡೀ ಮನೆಯನ್ನು ಜವಾಬ್ದಾರಿಯುತವಾಗಿ ಹೇಗೆ ಮುನ್ನಡೆಸಿಕೊಂಡು ಹೋಗಬೇಕು ಎಂಬುದನ್ನು ಎಳೆಯಾಗಿ ತಿಳಿಸಿಕೊಟ್ಟಿದ್ದಾರೆ. ಇತರ ಸಮಾಜದ ಮಹಿಳೆಯರಿಗೆ ಮಾದರಿಯಾಗಿ ಬದುಕುತ್ತಿದ್ದಾರೆ. ಇವೆಲ್ಲಾ ಅಂಶಗಳನ್ನು ಮನಗಾಣಿಸುವುದೇ ಈ ಕಿರು ಪ್ರಬಂಧದ ಒಟ್ಟಾರೆ ಉದ್ದೇಶವಾಗಿದೆ.

ಉಡುಪಿ ಜಿಲ್ಲೆಯ ಆರ್ಥಿಕ ಚಟುವಟಿಕೆಗಳಲ್ಲಿ ಅದರಲ್ಲಿಯೂ ಮೀನು ಮಾರಾಟ ಕ್ಷೇತ್ರದಲ್ಲಿ ಮಹಿಳೆಯರು ಗಮನಾರ್ಹ ಸ್ಥಾನ ಪಡೆದುಕೊಂಡಿದ್ದಾರೆ. ಈ ಜಿಲ್ಲೆಯು ಪಾರಂಪರಿಕವಾಗಿ ಮೀನುಗಾರಿಕೆಗೆ ಹೆಸರಾಗಿದೆ ಉಡುಪಿ ಬಳಿ ಇರುವ ಮಲ್ಪೆಯಲ್ಲಿ ಆಧುನಿಕ ಯಂತ್ರ ಚಾಲಿತ ಮೀನುಗಾರಿಕೆ ಅಭಿವೃದ್ಧಿಯಾಗಿದೆ. ಕಡೇಕಾರು ಗ್ರಾಮವು ಮಲ್ಪೆ ಕರಾವಳಿಯಿಂದ ೩ ಕಿ.ಮೀ ದೂರದಲ್ಲಿದೆ. ಗ್ರಾಮ ಪಂಚಾಯತ್ ವ್ಯಾಪ್ತಿಗೆ ೭ ವಾರ್ಡ್‌ಗಳು ಸೇರುತ್ತವೆ. ಒಂದೊಂದು ವಾರ್ಡ್ ಗಳಲ್ಲಿ ಸುಮಾರು ೧೦೦ರಿಂದ೧೨೦ ಮಂದಿ ಮೀನುಗಾರ ಮಹಿಳೆಯರು ಮೀನು ಮಾರಾಟ ಮಾಡುವವರಿದ್ದಾರೆ.

**ಕಡೇಕಾರು ಗ್ರಾಮದ ಮೋಗವೀರ ಮಹಿಳೆಯರು**

ಕಡೇಕಾರು ಗ್ರಾಮದ ಮಹಿಳೆಯರು ಆರ್ಥಿಕ ಜೀವನ ಮೀನುಗಾರಿಕೆಯಿಂದಲೆ ನಡೆಯುತ್ತದೆ. ಈ ಭಾಗದಲ್ಲಿ ತನ್ನ ಎಲ್ಲಾ ಬೇಕು ಬೇಡಗಳನ್ನು ಮಹಿಳೆಯರು ತಾವೇ ಪೂರೈಸಿಕೊಳ್ಳುತ್ತಾರೆ. ಮನೆಯ ನಿರ್ವಹಣೆಯ ಜೊತೆಗೆ ಮನೆಯ ಹೊರಗಿನ ವ್ಯಾಪಾರ ವ್ಯವಹಾರಗಳನ್ನು ಮಾಡಿಕೊಂಡು ಮೂಲಭೂತವಾಗಿ ಮನೆಗೆ ಬೇಕಾದ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾಳೆ. ಗಂಡಿನ ಸರಿ ಸಮವಾಗಿ ಸ್ವವಲಂಭಿಯಾಗಿಗಳಾಗಿ ನಮ್ಮ ಭಾಗದಲ್ಲಿ ವನಿತೆಯರು ಜೀವನ ನಡೆಸುತ್ತಾರೆ. ಬೆಳಿಗ್ಗೆಯಿಂದ ರಾತ್ರಿವರೆಗೂ ಬಿಡುವಿಲ್ಲದ ಕಾಯಕದಲ್ಲಿ ನಿರಂತರವಾಗಿ ತೊಡಗಿಸಿಕೊಳ್ಳುತ್ತಾರೆ.ದುಡಿಯುವ ಮಹಿಳೆಯರಿಗೆ ಈ ಭಾಗದಲ್ಲಿ ಪ್ರೋತ್ಸಾಹವಿದೆ. ಸಂಘ–

ಸಂಸ್ಥೆಗಳಿಂದ, ಬ್ಯಾಂಕುಗಳಿಂದ ಅನೇಕ ರೀತಿಯ ಸಹಾಯಸ್ತಗಳು ಒದಗಿ ಬಂದಿವೆ. ಪ್ರಗತಿಪರ ಚಿಂತನೆಗಳ ಅನೇಕ ಯೋಜನೆಗಳ ಮೂಲಕ ಸಹಾಯ ಸಿಕ್ಕಿದೆ.

**ಮೀನುಗಾರ ಮಹಿಳೆಯರ ಸಾಮಾಜಿಕ ಸ್ಥಿತಿಗತಿ**

ಕಡೇಕಾರು ಗ್ರಾಮದ ಮೊಗವೀರ ಮಹಿಳೆಯರು ನಿತ್ಯಶ್ರಮ ಜೀವಿಗಳಾಗಿದ್ದು, ಅವರ ವೃತ್ತಿಗೆ ಸಂಬಂಧಪಟ್ಟ ಕಾರ್ಯಗದಲ್ಲೇ ನಿರಂತರವಾದ ಚಿಂತನೆ ಮಾಡುತ್ತಿದ್ದರು. ಮೊಗವೀರ ಸ್ತ್ರೀಯರು ನೇಜಿ ನೆಡುವುದು ಪೈರು ಕೊಯ್ಯುವುದು ಭತ್ತ ಕೊಟ್ಟುವುದು ಮುಂತಾದ ಕೆಲಸಗಳನ್ನು ತಿಳಿದವರಾಗಿದ್ದಾರೆ. ಆದರೆ ಈ ಗ್ರಾಮದಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ಏಕೆಂದರೆ ಇವರು ಮೀನು ಮಾರಾಟ, ಮೀನು ಸಂಸ್ಕರಣ ಘಟಕಗಳ ಕಾರ್ಖಾನೆಗಳ ಮೀನಿನ ವಿಂಗಣೆ ಸೇರಿದಂತೆ ಮೀನು ಸಂಬಂಧಿತ ವೃತ್ತಿಯಲ್ಲಿ ನಿರತರಾಗಿದ್ದಾರೆ. ಜಿಲ್ಲೆಯ ಉತ್ತರ ಭಾಗದಲ್ಲಿ ಭತ್ತ ಕುಟ್ಟುವ ಹಾಡುಗಳು ಹೇರಳವಾಗಿದೆ. ಅವಿಭಕ್ತ ಕುಟುಂಬದಲ್ಲಿ ಬದುಕಬೇಕಾದರೆ ಹೆಣ್ಣು ಪ್ರತ್ಯೇಕವಾದ ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಅಣ್ಣನ ಹೆಂಡತಿಯಾಗಲಿ, ತಮ್ಮನ ಹೆಂಡತಿಯಾಗಲಿ ಒಂದೇ ಮನೆಯಿಂದ ಬಂದವರಲ್ಲ. ಅವರು ಬೇರೆ ಬೇರೆ ಕುಟುಂಬಗಳಿಂದ ಬಂದವರು. ಆದರೆ ಅವರು ಇಲ್ಲಿ ಅಕ್ಕತಂಗಿಯರ ಹಾಗೇ ಇದ್ದರೆ ಮಾತ್ರ ಆ ಸಂಸಾರದಲ್ಲಿ ಸುಖವಿರುತ್ತದೆ. ಒಂದು ಅವಿಭಕ್ತ ಕುಟುಂಬದ ಯಜಮಾನಿಯನ್ನು ಅಕ್ಕ ಎಂದು ಕರೆಯುತ್ತಾರೆ. ಮೊಗವೀರ ಹೆಣ್ಣು ಮಕ್ಕಳು ಸೋದರಿಕೆ ಸಂಬಂಧವನನ್ನು ಹೆಚ್ಚಾಗಿ ಇಷ್ಟಪಡುವುದಿಲ್ಲ. ಈ ಕಡೇಕಾರು ಗ್ರಾಮದಲ್ಲಿ ಈ ಪದ್ಧತಿ ಸಂಪೂರ್ಣವಾಗಿ ನಿಂತು ಹೋಗಿದೆ.

**ಕುಟುಂಬದಲ್ಲಿ ಅವಳ ಸ್ಥಾನಮಾನ**

ಕಡೇಕಾರು ಗ್ರಾಮದ ಸಮಾಜದಲ್ಲಿ ಮಹಿಳೆಯೂ ವ್ಯಾಪಾರ ವ್ಯವಹಾರ ಕ್ಷೇತ್ರದಲ್ಲಿ ಮುಂದುವರಿದಿದ್ದಾರೆ. ಸಾಮಾಜಿಕ ಹಾಗೂ ಕೌಟುಂಬಿಕ ಪರಿಸ್ಥಿತಿ ಎಲ್ಲಾ ಮೊಗವೀರ ಮಹಿಳೆಯರದ್ದು ಸಮಾನಾಗಿರುತ್ತದೆ. ಮಕ್ಕಳ ಆಶ್ರಯದಲ್ಲಿ ಪ್ರೀತಿ ವಿಶ್ವಾಸಗಳಿಂದ ಬದುಕುತ್ತಿದ್ದಾರೆ. ಮೊಗವೀರ ಪುರುಷರು ತಮ್ಮ ಸ್ತ್ರೀಯರನ್ನು ಬಲವಾಗಿ ನಂಬುತ್ತಾರೆ. ಗಂಡು ಗತ್ತಿನಿಂದ ತಡ ರಾತ್ರಿಯವರೆಗೂ ಹೆಂಗಸರು ಮನೆಯ ಹೊರಗೆ ದುಡಿಮೆ ಮಾಡುತ್ತಾರೆ. ಅದನ್ನು ಪುರುಷರು ಪ್ರೋತ್ಸಾಹಿಸುತ್ತಾರೆ. ಮಹಿಳೆಯರು ಈ ಭಾಗದಲ್ಲಿ ತಮ್ಮ ದುಡಿಮೆಯ ಮೂಲಕ ಆರ್ಥಿಕ ಭದ್ರತೆ, ಸಾಮಾಜಿಕ ಭದ್ರತೆ, ಕೌಟುಂಬಿಕ ಭದ್ರತೆಯನ್ನು ಯೋಗ್ಯ ರೀತಿಯಲ್ಲಿ ನಿರ್ವಹಣೆ ಮಾಡುತ್ತಾರೆ. ನಿಜವಾಗಿಯೂ ಕಡೇಕಾರು ಗ್ರಾಮದ ಸ್ತ್ರೀಯರು ಉತ್ತಮ ರೀತಿಯಲ್ಲಿ ಕುಟುಂಬದ ನಿರ್ವಹಣೆ ಮಾಡುತ್ತಾರೆ. ಅದನ್ನು ಪುರುಷರು ಒಪ್ಪಿಕೊಂಡಿದ್ದಾರೆ. ಈ ಭಾಗದ ಮನೆಯ ವಡತಿಯನ್ನು ಯಜಮಾನತಿ ಅಥವಾ ಅಕ್ಕ ಎಂದು ಕರೆಯುತ್ತಾರೆ. ಇವಳು ಮನೆಯ ಹಿರಿಯವಳಾಗಿ ತನ್ನ ಸಂಸಾರವನ್ನು ಮುನ್ನಡೆಸಿಕೊಂಡು ಹೋಗುತ್ತಾಳೆ. ಮನೆಯ ಒಳಿತಿಗಾಗಿ ಶಕ್ತಿ ಮೀರಿ ದುಡಿಯುತ್ತಾರೆ.

**ಸಮಾಜದಲ್ಲಿ ಆಕೆಯ ಪಾತ್ರ**

ಕಡೇಕಾರು ಗ್ರಾಮದ ಮೊಗವೀರ ಮಹಿಳೆಯರು ಕೆಲವೊಂದು ಸಂಘ-ಸಂಸ್ಥೆಗಳಲ್ಲಿ ಭಾಗವಹಿಸಿಕೊಂಡು ಶಿಕ್ಷಣ ವಲಯ ಧಾರ್ಮಿಕ ವಲಯ, ರಾಜಕೀಯ ವಲಯ, ಸಾಮಾಜಿಕ ವಲಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾಳೆ. ಅನೇಕ ಸಾಮಾಜಿಕ ಕಾರ್ಯಕ್ರಮಗಳಾದ ರಕ್ತದಾನ ಶಿಬಿರ, ಆರೋಗ್ಯ ಶಿಬಿರ ಮೊದಲಾದವುಗಳಲ್ಲಿ ಪಾಲ್ಗೊಳ್ಳುತ್ತಿದ್ದಾಳೆ. ಕಡೇಕಾರು ವನಿತೆಯರು ಬಿಡುವಿಲ್ಲದ ವೃತ್ತಿಯಲ್ಲಿ ತೊಡಗಿಸಿಕೊಂಡರು ಕೂಡ ಶ್ರಮಧಾನಗಳಲ್ಲಿ ಸಾಮಾಜಿಕ ಸಭೆಗಳಲ್ಲಿ, ದೇವಸ್ಥಾನಗಳಲ್ಲಿ, ಹಬ್ಬಹರಿದಿನ, ಜಾತ್ರೆಗಳಲ್ಲಿ ಉಚಿತವಾಗಿ ಸ್ವಯಂ ಪ್ರೇರಿತ ಸೇವೆಯನ್ನು ನೀಡುತ್ತಿದ್ದಾರೆ. ಮೊಗವೀರ ಮಹನೀಯರು ಸ್ತ್ರೀಯರಿಗೆ ವಿಶೇಷವಾದ ಸಹಕಾರ ನೀಡುವುದರಿಂದ ಆಕೆಗೆ ಸಮಾಜದಲ್ಲಿ ಎಲ್ಲಾ ಕ್ಷೇತ್ರದಲ್ಲಿ ಗೌರವ ಸಿಗುತ್ತಿದೆ. ಮಹಿಳೆಯರ ದಕ್ಷ ಆಡಳಿತದಿಂದ ಈ ಭಾಗದಲ್ಲಿ ಶೈಕ್ಷಣಿಕವಾಗಿ ಮುಂದುವರಿದಿರುವುದು ನಾವು ನೋಡಬಹುದಾಗಿದೆ. ನಾವು ಗಮನದಲ್ಲಿಟ್ಟುಕೊಳ್ಳಬೇಕಾದ ಅಂಶಗಳೆಂದರೆ ಈ ಭಾಗದಲ್ಲಿ ವಿದ್ಯಾಭ್ಯಾಸದ ಮಟ್ಟವು ಅಧಿಕವಾಗಿರುತ್ತದೆ. ಉನ್ನತ ಮಟ್ಟದ ಶಿಕ್ಷಣವು ಇಲ್ಲಿರುವುದು ಕಂಡುಬರುತ್ತದೆ. ಕಡೇಕಾರು ಗ್ರಾಮದಲ್ಲಿ ಹೆಣ್ಣು ಗಂಡು ಭೇದವಿಲ್ಲದೆ ಸಮಾನ ದೃಷ್ಟಿಕೋನದಿಂದ ಕೆಲಸ ನಿರ್ವಹಿಸುತ್ತಾರೆ. ಕಡೇಕಾರು ಗ್ರಾಮದ ಮೊಗವೀರರಲ್ಲಿ ಹುಟ್ಟಿನಿಂದ ಸಾವಿನವರೆಗೂ ನಡೆಯುವ ಎಲ್ಲಾ ಆಚರಣೆಗಳುಸ್ತ್ರೀಯರೇ ಕೇಂದ್ರ ಬಿಂದುವಾಗಿರುತ್ತಾರೆ. ಅವರಿಗೆ ವಿಶೇಷವಾಗಿ ಸ್ಥಾನಮಾನಗಳನ್ನು ನೀಡಲಾಗಿದೆ. ಬಾಣಂತಿಯನ್ನು ವಿಶೇಷವಾದ ಕಾಳಜಿಯಿಂದ ನೋಡಿಕೊಳ್ಳುತ್ತಿರುವುದು. ಮಗು ಹೆತ್ತ ನಂತರ ಯಾವ ಮಡಿ ಮೈಲಿಗೆಗಳಿಲ್ಲದೆ ಒಳಗೆ ಸೇರಿಸಿಕೊಳ್ಳುತ್ತಾರೆ. ಜೊತೆಗೆ ಉತಮವಾದ ಆರೈಕೆ ಮಾಡುತ್ತಾರೆ. ಋತುಮತಿಯಾದಾಗ ಹೆಣ್ಣು ಮಕ್ಕಳಿಗೆ ಪೌಷ್ಠಿಕ ಆಹಾರ ನೀಡಿ ಉತ್ತಮವಾಗಿ ಪೋಷಿಸುತ್ತಾರೆ. ಸ್ವಲ್ಪಮಟ್ಟಿಗೆ ಋತುವಾದ ಸಂದರ್ಭದಲ್ಲಿ ಮುಟ್ಟಿಸಿಕೊಳ್ಳುವುದಿಲ್ಲ. ಉಳಿದಂತೆ ಮೊಗವೀರ ಸ್ತ್ರೀಯರಿಗೆ ಗೌರವಿರುತ್ತದೆ. ಮೊಗವೀರರ ಕುಲಕಸುಬು ಕೂಡ ಸ್ತ್ರೀ ಮೂಲಕವೇ ಆಗಿದೆ. ಕಡಲನ್ನು ಗಂಗೆಯೆಂದು ಪ್ಯೂಜಿಸುತ್ತಾರೆ. ಹೆಣ್ಣಿನ ಹೆಸರಿನಿಂದಲೇ ಅವರ ಜೀವನ ವರ್ತನ ಆಚರಣೆಗಳು ನಡೆಯುತ್ತದೆ. ಅವರು ಹಿಡಿಯುವ ಮೀನನ್ನು ಕೂಡ ಸ್ತ್ರೀ ರೂಪದಲ್ಲಿಯೇ ಗೌರವಿಸುತ್ತಾರೆ. ಮೊಗವೀರರ ಕುಲದೇವರು ಸಹ ಹೆಣ್ಣೆ. ಕಡೇಕಾರು ಗ್ರಾಮದಲ್ಲಿ ಮಗು ಹುಟ್ಟಿದಾಗ ೭ ದಿವಸಗಳ ನಂತರ ನಾಮಕರಣ ಮಾಡುತ್ತಾರೆ. ಕೆಲವರು ೧೧ ದಿನಕ್ಕೂ ಮಾಡುವುದುಂಟು. ಆ ದಿನ ಎಕ್ಕೆ ಗಿಡದ ನಾರು ತೆಗೆದು ಮಗುವಿಗೆ ಉಡಿದಾರ ಕಟ್ಟುತ್ತಾರೆ. ಹನ್ನೊಂದನೆ ದಿನ ಆಮೆ ಶುದ್ಧವಾಗುತ್ತದೆ. ಕೆಲವರು ೧೩ ದಿನಕ್ಕೂ ಮಾಡುತ್ತಾರೆ. 'ಬಿಜ್ಜಂತಿ' ಅಥವಾ 'ಬಿಜ್ಜಲತಿ'(ಸೂಲಗಿತ್ತಿ)ಯೇ ಬಂದು ಸ್ನಾನ ಮಾಡಿಸಬೇಕು. ಆ ನಂತರ ಆಮೆ ಹೊಂಡದ ಒಳ ಬಂದು ದೀಪ ಉರಿಸಿ, ಐದು ದೊಟೆಯನ್ನು ತಂದು ಆ ಹೊಂಡಕ್ಕೆ ಹಾಕುತ್ತಾರೆ. ಆನಂತರ ಹೊಂಡವನ್ನು ಮುಚ್ಚಿ ಅದರಲ್ಲಿ ಬಾಳೆ ಗಿಡವೋ ಬಸಳೇ ಗಿಡವೋ ನೆಡುತ್ತಾರೆ. ನಂತರ ಮಗುವಿನ ನಾಮಕರಣ ಮಾಡುತ್ತಾರೆ. ಶುಭ ಸಂಕೇತವಾಗಿ ಸಿಹಿಯನ್ನು ವಿತರಿಸುತ್ತಾರೆ. ಕೊನೆಯಲ್ಲಿ

ಹಬ್ಬದ ಅಡುಗೆ ಮಾಡಿ ಊಟ ಮಾಡುತ್ತಾರೆ. ಮಗುವಿಗೆ ಶುಭವಾಗಲಿ ಎಂದು ಹರಸಿ ಮುಯಿ ಹಾಕುತ್ತಾರೆ. ಕಡೇಕಾರು ಗ್ರಾಮದಲ್ಲಿ ಹೆಣ್ಣುಮಕ್ಕಳು ಮೊದಲನೇ ಬಾರಿ ಮೈ ನೆರೆದಾಗ ತುಳು ಸಂಪ್ರದಾಯದಂತೆ ಕೆಲವೊಂದು ಆಚರಣೆಗಳನ್ನು ಮಾಡುತ್ತಾರೆ. ಬೇರೆ ಬೇರೆ ಬೆಡಗುಗಳ ಮೂರು ಅಥವಾ ಐದು ಮಂದಿ ಹೆಂಗಸರನ್ನು ಮನೆಗೆ ಆಮಂತ್ರಿಸಬೇಕು. ಸಿಪ್ಪೆ ತೆಗೆದ ಏಳು ತೆಂಗಿನಕಾಯಿಗಳನ್ನು ನೆಲದಲ್ಲಿ ಹರಡಿ ಅದರ ಮೇಲೆ ಆಕೆಯನ್ನು ಕುರಿಸಬೇಕು ಸುತ್ತಲೂ ನಾಲ್ಕು ಮಣ್ಣಿನ ಪಾತ್ರೆಗಳಲ್ಲಿ ಕಲಶದ ನೀರು ತುಂಬಿಸಿಡಬೇಕು. ಬಂದ ಮುತ್ತೈದೆಯರು ಆಕೆಯ ತಲೆಗೆ ಅಕ್ಕಿಕಾಳು ಹಾಕಿ ಆ ಕಲಶಗಳಲ್ಲಿರುವ ನೀರನ್ನು ಎರೆಯುತ್ತಾರೆ. ಆ ನಂತರ ಆಕೆ ಸ್ನಾನ ಮಾಡಿಕೊಂಡು ಶುಚಿಯಾದ ಹೊಸಬಟ್ಟೆ ತೊಟ್ಟು ಬರುತ್ತಾಳೆ. ಆಕೆಗೆ ಮದುಮಗಳ ಹಾಗೆ ಶೃಂಗಾರ ಮಾಡಿ ಮಂಗಳರಾತಿ ಬೆಳಗಿಎಲ್ಲರೂ ಆಶೀರ್ವಾದ ಉಡುಗೊರೆಯನ್ನು ನೀಡುತ್ತಾರೆ. ಅನ್ನಕ್ಕೆ ತೆಂಗಿನಕಾಯಿ ಹೆರೆದು ಮಿಶ್ರಣ ಮಾಡಿ ಎಲ್ಲರೂ ಊಟ ಮಾಡುವುದು ಸಂಪ್ರದಾಯವಾಗಿದೆ. ಇದರೊಂದಿಗೆ ಓಮಾ, ಸಾಸಿವೆ, ಮೆಂತೆ, ಜೀರಿಗೆ, ಕಾಳು ಮೆಣಸು ಮತ್ತು ವಾಲೇ ಬೆಲ್ಲ ಇವಿಷ್ಟನ್ನು ಸ್ವಲ್ಪ ನೀರು ಸೇರಿಸಿ ಚೆನ್ನಾಗಿ ರುಬ್ಬಿ, ಒಂದಿಷ್ಟು ತುಪ್ಪವನ್ನು ಹಾಕಿ, ಆ ಪಾನೀಯವನ್ನು ಆಕೆಗೆ ಕುಡಿಸಬೇಕು. ಹೀಗೆ ಹದಿಮೂರು ದಿನಗಳ ಕಾಲ ಔಷಧಿಯಂತೆ ಪಾನೀಯವನ್ನು ಸೇವಿಸಬೇಕು. ತುಳುನಾಡಿನ ಅತೀ ಪ್ರಾಚೀನ ಜನಾಂಗವಾದ ಮೊಗವೀರರು ವಂಶಾನುಕ್ರಮವಾಗಿ ಹೆಣ್ಣು ನೋಡುವ ಮೊದಲು ಬಳಿ ಅಥವಾ ಬೆಡಗುಗಳನ್ನು ನೋಡುತ್ತಾರೆ. ಕಡೇಕಾರು ಗ್ರಾಮದ ಮೊಗವೀರರಲ್ಲಿಯೂ ಇದೇ ರೀತಿ ಇರುತ್ತದೆ. ಬಳಿಯನ್ನು ಗೋತ್ರ ಎನ್ನುತ್ತೇವೆ. ತುಳುವೀರರು ಇದನ್ನು 'ಬರಿ' ಎನ್ನುತ್ತಾರೆ. ವಿವಾಹಾದಿ ಸಂದರ್ಭಗಳಲ್ಲಿ ನೆಂಟಸ್ತಿಕೆಯನ್ನು ನಿಶ್ಚಯಿಸುವಾಗ, ವಧುವರರ ಗೋತ್ರ ಮುಖ್ಯವಾಗಿರುತ್ತದೆ. ಮೊಗವೀರರಲ್ಲಿ ಸ್ವಗೋತ್ರ ವಿವಾಹ ನಿಷಿಧವಾಗಿದೆ. ತುಳುನಾಡಿನಲ್ಲಿ ಮುಖ್ಯವಾಗಿ ಅಮ್ಮಣ್ಣಾಯ, ಕಂಚನಾಯ, ಕರ್ಬುರನ್ನಾಯ, ಕುಂದನ್ನಾಯ, ಕೋದ್ಯನ್ನಾಯ, ಮೈಂದಣ್ಣಾಯ, ಸಾಲೆನ್ನಾಯ, ಸಿರಿಯನ್ನಾಯ ಎಂಬುವ ಬರಿಗಳಿದೆ. ಹುಡುಗಿಯ ಮನೆಗೆ ಗಂಡು ಅಥವಾ ಗಂಡಿನ ಕಡೆಯವರು ಹುಡುಗಿಯನ್ನು ನೋಡಿಕೊಂಡು ಇಷ್ಟವಾದರೆ ಅಲ್ಲಿಯೇ ಊಟ ಇಲ್ಲವಾದರೆ ಮನೆಗೆ ಹೋಗಿ ಹೇಳುತ್ತೇವೆ ಎಂದು ಸೂಚನೆ ನೀಡಿ ಬರುವುದು ಈಗ ಈ ಪದ್ಧತಿ ದೇವಸ್ಥಾನ ಅಥವಾ ಇನ್ನಿತರ ಸಮಾರಂಭ ಮದುವೆಗಳಲ್ಲಿ ಮೊದಲೆ ನೋಡಿಕೊಳ್ಳುತ್ತಾರೆ. ನಂತರ ಮನೆಗೆ ಬರುತ್ತಾರೆ. ವರನ ಕಡೆಯವರು ಮತ್ತು ಗುರಿಕಾರರು ನೆಂಟಸ್ತಿಕೆ ಮಾತನಾಡಲು ಹುಡುಗಿ ಮನೆಗೆ ಹೋಗುತ್ತಾರೆ. ನೆಂಟಸ್ತಿಕೆ ಆಗಬಹುದು ಎಂದಾದರೆ ಎರಡು ಕಡೆಯವರು ಸೇರಿ ಮುಂದೊಂದು ದಿನ ನಿಶ್ಚಯ ಮಾಡಿ ಗ್ರಾಮ ದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿ 'ಪ್ರಸಾದ ಶಾಸ್ತ್ರ' ನಡೆಯುತ್ತದೆ. ದೇವರಿಗೆ ಮಂಗಳಾರತಿಯಾಗುವಾಗ ಪ್ರಸಾದ ಹೂಗಳು ಕೆಳಗೆ ಉದುರಿದರೆ ಆ ಮದುವೆಗೆ ದೇವರ ಅಪ್ಪಣೆ ಉಂಟೆಂದು ಅರ್ಥ. ನಾಲ್ಕೈದು ಆರತಿ ಆಗುವವರೆಗೂ ಪ್ರಸಾದ ಹೂ ಉದುರದಿದ್ದರೆ ದೇವರ ಒಪ್ಪಿಗೆ ಇಲ್ಲವೆಂದು ಅರ್ಥ. ಅಂಥ ಸಂದರ್ಭದಲ್ಲಿ ಈ ನೆಂಟಸ್ತಿಕೆಯನ್ನು ಕೈ ಬಿಡಲಾಗುವುದು. ಮುಂದಿನದು ನಂಜಿಗೆ ರಾತ್ರಿ ಗಂಡಿನ ಕಡೆಯವರು ತಮ್ಮ ಗುರಿಕಾರನನ್ನು ಕರಕೊಂಡು ಹೆಣ್ಣಿನ ಮನೆಗೆ ಹೋಗುತ್ತಾರೆ. ಅಲ್ಲಿ ಮದುವೆಯ ನಿಶ್ಚಿತಾರ್ಥ ಅಥವಾ ನಂಬಿಕೆ ಶಾಸ್ತ್ರ ಜರುಗುತ್ತದೆ. ಹೆಣ್ಣಿನ

ಕಡೆಯ ಗುರಿಕಾರನು ವರನ ಹೆಸರು ಹೇಳಿ(ಉದಾ: ರಾಮ ಎಂದಿದ್ದರೆ) "ರಾಮ ಎಂಬ ಹೆಸರಿನ ಹುಡುಗನೇ ನಮ್ದು"ಎಂದು ಮೂರು ಸಲ ಹೇಳಿ ಗಂಡಿನ ಕಡೆಯ ಗುರಿಕಾರನ ಕೈ ಮುಟ್ಟುತ್ತಾನೆ. ಆನಂತರ ಹೆಣ್ಣಿನ ಕಡೆಯ ಗುರಿಕಾರರು ಅದೇ ರೀತಿ ಮಾಡುತ್ತಾರೆ. ಎರಡು ಕಡೆಯವರು ತುಳಸಿಕಟ್ಟೆಯಲ್ಲಿ 'ದೇವರ ವೀಳ್ಯೆ'ವನ್ನಿಡುತ್ತಾರೆ. ಆನಂತರ ಬಂದ ಮುಖ್ಯಸ್ಥರಿಗೆಲ್ಲ ವೀಳ್ಯ ಪಟ್ಟ ಕೊಡುತ್ತಾರೆ. ಮುಂದಿನ ಕಾರ್ಯಕ್ರಮ ನಂಬಿಕೆ ಸೀರೆ ಉಡಿಸುವುದು. ಮುತ್ತೈದೆಯರು ವಧುವಿಗೆ ಹೊಸ ಸೀರೆ ಉಡಿಸುತ್ತಾರೆ.
ಕಡೇಕಾರು ಗ್ರಾಮದ ಮೊಗವೀರ ಮದುವೆಗಳು ಮೊದಲಿನ ಕಾಲದಲ್ಲಿ ವರನ ಮನೆಯಲ್ಲಿ ಜರುಗುತ್ತಿದ್ದವು. ಅಲ್ಲಿಗೆ ಹೆಣ್ಣಿನ ಕಡೆಯವರು ದಿಬ್ಬಣ ಬರಬೇಕು. ದಿಬ್ಬಣ ತೋರಣದ ಬಳಿ ಬಂದೊಡನೆ ವರನ ಮನೆಯ ಹೆಂಗಸರು ವಧುವಿನ ಹಣೆಗೆ ಕುಂಕುಮ ಹಚ್ಚಿ ತಲೆಗೆ ಹೂ ಮುಡಿಸುತ್ತಾರೆ. ದಿಬ್ಬಣಿಗರೆಲ್ಲ ಒಳಗೆ ಬಂದು ಕೂತ ಬಳಿಕೆ ಎರಡು ಕಡೆಯವರೂ ಬಾಳೆಲೆಯಲ್ಲಿ ವೀಳ್ಯದೆಲೆ ಅಡಿಕೆ ಸಿದ್ಧಪಡಿಸಿಕೊಂಡು ಪರಸ್ಪರ ಬರಿ(ಗೋತ್ರ) ಕೇಳುತ್ತಾರೆ. ಆನಂತರ ವಧುವಿನ ಕಡೆಯವರು 'ಎಂಕ್ಲೆನ ಪೊಣ್ಣ್ ಸಂದ್‌ಡ್'ಎಂದೂ ಮೂರು ಬಾರಿ ಹೇಳಿ ಇನ್ನೊಮ್ಮೆ ವಿವಾಹ ನಿಶ್ಚಯವನ್ನು ಖಾತ್ರಿಗೊಳಿಸುತ್ತಾರೆ ಹಾಗೂ ವೀಳ್ಯದೆಲೆ ಅಡಿಕೆಯನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಈಗ ಆಧುನಿಕವಾಗಿ ಚಿನ್ನದ ಉಂಗುರ ವಿನಿಮಯ ಮಾಡಿಕೊಳ್ಳುವುದುಂಟು. ದಿನವನ್ನು ಆಯ್ಕೆ ಮಾಡಿ ತವರು ಮನೆಗೆ ಕರಕೊಂಡು ಹೋಗಿ ಅಲ್ಲಿ 'ಬಯಕೆ' ಮದುವೆ ನಡೆಸುತ್ತಾರೆ. ಬಯಕೆ ಮದುವೆಗೆ ಯಾವುದಾದರೂ ಐದು ಬಗೆಯ ಭಕ್ಷ್ಯ ತಯಾರಿಸಲೇಬೇಕೆಂಬ ಸಂಪ್ರದಾಯವಿದೆ. ಆ ದಿನ ಬಸಳೆ ಪಲ್ಯ ಅಥವಾ ನುಗ್ಗೆ ಸೊಪ್ಪಿನ ಪಲ್ಯ ಮತ್ತು ಕೋಳಿ ಮೊಟ್ಟೆ ಅಗತ್ಯವಾಗಿಬೇಕು. ಭಕ್ಷ್ಯಗಳನ್ನೆಲ್ಲಾ ಬಳಸಿದ ನಂತರ ಅದರಿಂದ ಸ್ವಲ್ಪ ತೆಗೆದು ಗರ್ಭಿಣಿಯ ಬಾಯಿಗೆ ಮುಟ್ಟಿಸಿ, ಆ ನಂತರ ಒಂದು ಗಂಡು ಮಗುವಿಗೂ, ಹೆಣ್ಣು ಮಗುವಿಗೂ ತಿನ್ನಲು ಕೊಡಬೇಕು. ಬಳಿಕ ಸ್ವಲ್ಪ ಕಜ್ಜಾಯವನ್ನು ಒಂದು ಪೆಟ್ಟಿಗೆ ಒಳಗೆ ಇಟ್ಟು ಅದಕ್ಕೆ ಧಾರೆ ಸೀರೆಯನ್ನು ಮುಟ್ಟಿಸಿ ತುಳಸಿಕಟ್ಟೆಯ ಬಳಿ ಪ್ರತ್ಯೇಕವಾಗಿ ತೆಗೆದಿಡುತ್ತಾರೆ. ಬಳಿಕ ಎಲ್ಲರೂ ಊಟ ಮಾಡುತ್ತಾರೆ. ಆ ಪಿಠಾರಿಯನ್ನು ಆಕೆಯ ಗಂಡನ ಮನೆಗೆ ಕೊಂಡು ಹೋಗುವ ಜವಾಬ್ದಾರಿ ಆಕೆಯ ಅಣ್ಣ ಅಥವಾ ತಮ್ಮನದು. ವ್ಯಕ್ತಿಯು ಸತ್ತ ಕೂಡಲೇ ತಲೆ ಮತ್ತು ಕಾಲುಗಳ ಹತ್ತಿರ ತೆಂಗಿನ ಕಾಯಿ ಕಡಿಗಳಲ್ಲಿ ಎಣ್ಣೆ ಬತ್ತಿಹಾಕಿ. ದೀಪವುರಿಸುವ ಸಂಪ್ರದಾಯವಿದೆ. ತಲೆ ಮತ್ತು ಕಾಲುಗಳ ಹತ್ತಿರ ಒಂದು ಸೇರು ಅಕ್ಕಿ ಮತ್ತು ಒಂದು ಸೇರು ಭತ್ತ ಇಡುವ ಸಂಪ್ರದಾಯವೂ ಇದೆ.

## ಅಧ್ಯಯನದ ವ್ಯಾಪ್ತಿ

ಕರ್ನಾಟಕದ ಕರಾವಳಿ ದೀರ್ಘವಾದ ಭೂಮಿ ಮತ್ತು ನೀರಿನ ನಡುವಿನ ಸಂಪರ್ಕ ಕೇಂದ್ರವಾಗಿದೆ. ದಕ್ಷಿಣ ಕನ್ನಡ, ಉಡುಪಿ ಉತ್ತರ ಕನ್ನಡವೆಂಬ ಮೂರು ಜಿಲ್ಲೆಗಳನ್ನು ಒಳಗೊಂಡಿದೆ. ಅನೇಕ ನದಿ ಮತ್ತು ಘಟ್ಟ ಪ್ರದೇಶಗಳನ್ನು ಒಳಗೊಂಡಿದೆ. ಸಮುದ್ರ ಮಾತ್ರವಲ್ಲದೆ, ನದಿಗಳ ಹಿನ್ನೀರಿನಲ್ಲಿಯೂ ಮೀನುಗಾರಿಕೆ

ನಡೆಯುತ್ತದೆ. ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ಒಳನಾಡ ಮೀನುಗಾರಿಕೆಯು ನಡೆಯುತ್ತದೆ. ಈ ಮೀನುಗಾರಿಕೆ ಎಂಬುದು ನಾಡಿನ ಜನತೆಗೆ ಜನತೆಗೆ ಜಲಚರಗಳ ಆಹಾರವನ್ನು ಒದಗಿಸುವುದಲ್ಲದೆ, ನಾಡು ಮತ್ತು ದೇಶಕ್ಕೆ ಆರ್ಥಿಕ ಲಾಭವನ್ನು ತಂದುಕೊಟ್ಟಿದೆ. ಇದೆಲ್ಲವನ್ನು ಅಧ್ಯಯನ ಮಾಡಿ ಈ ಕಿರು ಪ್ರಬಂಧದಲ್ಲಿ ನ್ಯಾಯ ಸಲ್ಲಿಸಲು ಸಾಧ್ಯವಿಲ್ಲ. ಆದ್ದರಿಂದ ಸಾಂಕೇತಿಕವಾಗಿ ಉಡುಪಿ ಜಿಲ್ಲೆಯ 'ಕಡೇಕಾರು ಎಂಬ ಗ್ರಾಮವೊಂದನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಸ್ತುತ ಪ್ರಬಂಧಗಾರ್ತಿಯು ಮೀನುಗಾರ ಸಮುದಾಯಕ್ಕೆ ಸೇರಿದವಳಾಗಿ, ಒಂದು ಸೀಮಿತ ಪ್ರದೇಶದ ಕೇತ್ರಕಾರ್ಯದ ಮೂಲಕ ನಾಡಿನ ಮೀನುಗಾರ ಮಹಿಳೆಯರ ಬದುಕು ಬವಣೆಯ ಚಿತ್ರ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಒಂದು ಗ್ರಾಮವನ್ನು ಸಾಂಕೇತಿಕವಾಗಿ ತೆಗೆದುಕೊಂಡಿದ್ದರೂ, ಕರಾವಳಿಯ ಒಟ್ಟಾರೆ ಮೀನುಗಾರಿಕೆ ಮತ್ತು ಅದರ ಪರಿಣಾಮಗಳನ್ನು ಹಾಗೂ ಅದರಲ್ಲಿ ತೊಡಗಿಕೊಂಡ ಮಹಿಳೆಯರ ಸಾಮಾಜಿಕ .ಆಧುನಿಕ ಮತ್ತು ಧಾರ್ಮಿಕ ಬದುಕನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಅಧ್ಯಾಯನ ವಿಧಾನ**

ನಾನು ಉಡುಪಿ ಜಿಲ್ಲೆಯ ಮೀನುಗಾರ ಕುಟುಂಬಕ್ಕೆ ಸೇರಿದವಳಾಗಿ ಸ್ವ ಅನುಭವವು ಸಾಕಷ್ಟಿದೆ. ಜೊತೆಗೆ ನನ್ನ ಪರಿಸರದ ಸೋದರಿಯರು , ತಾಯಂದಿರು, ಅಜ್ಜಿಯರು ನಿರ್ವಹಿಸುವ ಜವಾಬ್ದಾರಿಗಳನ್ನು ನಾನು ಹತ್ತಿರದಿಂದ ಗಮನಿಸು ಅವಕಾಶವಂತೂ ಇರಲಿಕ್ಕೆ ಉಂಟು ಈ ಸ್ವ ಅನುಭವದ ಜೊತೆಗೆ ಅಧ್ಯಯನದ ಶಿಸ್ತಿಗೆ ಅನುಗುಣವಾಗಿ ಕೆಲವು ಕೆಲವು ವಿಧಿ ವಿಧಾನಗಲನ್ನು ಈ ಪ್ರಬಂಧ ರಚನೆಯಲ್ಲಿ ಅನುಸರಿಸಲಾಗಿದೆ.

**ಸಂದರ್ಶನ**

ಕಡೇಕಾರು ಗ್ರಾಮದ ಬಹುತೇಕ ಮನೆಗಳನ್ನು ಸಂದರ್ಶಿಸಿ, ಪ್ರಬಂಧದ ವಿಷಯಕ್ಕೆ ಅನುಗುಣವಾಗಿ ವಿಷಯಗಳನ್ನು ಸಂಗ್ರಹಿಸಲಾಗಿದೆ.

**ಮಾಹಿತಿ ಸಂಗ್ರಹ**

ಮೀನುಗಾರಿಕೆಯ ಕುರಿತು ಈಗಾಗಲೇ ಪ್ರಕಟಗೊಂಡಿರುವ ಲೇಖನ ಮತ್ತು ಪುಸ್ತಕಗಳನ್ನು ಸಮೀಕ್ಷಿಸಿ ಸಾಮಾನ್ಯ ವಿವರಗಳನ್ನು ಕಲೆಹಾಕಲಾಗಿದೆ. ಕಡೇಕಾರು ಗ್ರಾಮವಷ್ಟೇ ಅಲ್ಲದೆ, ಜಿಲ್ಲೆಯ ಪ್ರಮುಖ ಮೀನುಗಾರಿಕ ಬಂದರುಗಳನ್ನು ,ಅದರಲ್ಲಿಯೂ ಮಲ್ಪೆ ಬಂದರನ್ನು ವಿಶೇಷವಾಗಿ ಖುದ್ದಾಗಿ ಭೇಟಿ ಕೊಟ್ಟು ಮಾಹಿತಿ ಸಂಗ್ರಹಿಸಲಾಗಿದೆ. ಹಳ್ಳಿಗಳ ಮತ್ತು ಪೇಟೆ ಬೀದಿಗಳ ಮೀನು ಮಾರುಕಟ್ಟೆಗಳಿಗೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸಲಾಗಿದೆ.

**ಪ್ರಶ್ನಾವಳಿ**

ಈ ಪ್ರಬಂಧದ ಉದ್ದೇಶಗಳಿಗೆ ಅನುಗುಣವಾಗಿ ಪ್ರಶ್ನಾವಳಿಯೊಂದನ್ನು ಸಿದ್ದ ಪಡಿಸಿಕೊಂಡು, ಕಡೇಕಾರು ಗ್ರಾಮದ ಪುರುಷರು ಮತ್ತು ಮಹಿಳೆಯರಿಗೆ ಪ್ರಶ್ನೆಗಳನ್ನು ಹಾಕಿ ಉತ್ತರ ಕಂಡುಕೊಳ್ಳಲಾಗಿದೆ. ಆ ಉತ್ತರಗಳನ್ನು ಬರಹದಲ್ಲಿ ಸೂಕ್ತ ಸಂದರ್ಭಕ್ಕೆ ಅನುಗುಣವಾಗಿ ಸಾಮಾನ್ಯ ಸ್ವರೂಪದಲ್ಲಿ ಬಳಸಿಕೊಳ್ಳಲಾಗಿದೆ.

**ವಿಶ್ಲೇಷಣೆ**

ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ ' ಮೊಗವೀರರ ಸಂಸ್ಕೃತಿ' ಗ್ರಂಥವನ್ನು ಬಿಟ್ಟರೆ ಕರಾವಳಿ ಮೀನುಗಾರ ಸಮುದಾಯವನ್ನು ಪರಿಚಯಿಸುವ ಮತ್ಯಾವುದೇ ಪರಿಕ್ಷಣ ಪುಸ್ತಕ ಪ್ರಕಟವಾಗಿಲ್ಲ. ಬಂದಿರುವ ಲೇಖನಗಳಲ್ಲಿ ಕಡಿಮೆ ಪುಣಿಚಿತ್ತಾಯರ ಪುಸ್ತಕ ಕೂಡ ಅನುಭವದ ಕೊರತೆಯನ್ನು ದೃಡಪಡಿಸುತ್ತದೆ ಎಂಬುದು ನನ್ನ ಅಭಿಪ್ರಾಯ ಮೀನುಗಾರಿಕೆ ಬಗೆಗಿನ ಅಂಕಿ ಅಂಶಗಳು ಹಾಗೂ ಪ್ರಾಕೃತಿ ವಿವರಣೆಗಳು ಸಾಕಷ್ಟು ಸಿಗುತ್ತವೆ. ಆದರೆ ಮೀನುಗಾರ ಮಹಿಳೆಯರನ್ನೇ ಕುರಿತ ಗ್ರಂಥವಾಗಲಿ, ಸುದೀರ್ಘ ಲೇಖನವಾಗಲಿ ನನ್ನ ಗಮನಕ್ಕೆ ಬಂದಿಲ್ಲ. ಈ ಹಿನ್ನಲೆಯಲ್ಲಿ ನನ್ನ ಕ್ಷೇತ್ರಕಾರ್ಯ ಮತ್ತು ನನ್ನ ಸ್ವ ಅನುಭವದ ಹಿನ್ನಲೆಯಲ್ಲಿ, ಲಭ್ಯ ಪೂರಕ ಮಾಹಿತಿಗಳನ್ನು ಬಳಸಿಕೊಂಡು, ಸಾಧ್ಯವಿರುವ ಕಡೆ ನನ್ನದೇ ವಿಶ್ಲೇಣೆ ಮಾಡಿದ್ದೇನೆ. ಮುಖ್ಯವಾಗಿ ಕರಾವಳಿ ಮೀನುಗಾರ ಮಹಿಳೆಯರ ಶ್ರಮ ಪ್ರಾಮಾಣಿಕತೆ, ಗಂಡು ಹೆಣ್ಣೆಂಬ ಭೇದವಿಲ್ಲದ ಸಮಾನತೆ ಹಾಗೂ ಈ ಮೂಲಕ ಅಲ್ಲಿನ ಮಾಹಿಳೆಯರು ಸಾಧಿಸಿರುವ ಯಶಸ್ಸನ್ನು ಮಾಹಿತಿಗಳ ಮೂಲಕ ವಿಶ್ಲೇಷಿಸುವ ಪ್ರಯತ್ನ ಮಾಡಿದ್ದೇನೆ. ಅವಶ್ಯಕತೆಗೆ ಅನುಗುಣವಾಗಿ ಅಂಶಗಳ ಮಾದರಿಯನ್ನು ನೀಡಲಾಗಿದೆ.

## ಅಧ್ಯಾಯ ೨

## ಕರ್ನಾಟಕದಲ್ಲಿ ಮೀನುಗಾರಿಕೆ ಒಂದು ಸಂಕ್ಷಿಪ್ತನೋಟ

ಕರ್ನಾಟಕ ರಾಜ್ಯವು ೩೨೦ ಕಿ.ಮೀ. ಉದ್ದದ ಕರಾವಳಿ ತೀರದೊಂದಿಗೆ ಮತ್ತು ೨೭,೦೦೦ ಚ.ಮೀ ಗುಡ್ಡಗಾಡು ಪ್ರದೇಶದೊಂದಿಗೆ ಹಾಗೂ ೫.೬೫ ಕಿ.ಮೀ. ಪ್ರದೇಶ ವಿವಿಧ ಒಳನಾಡು ಜಲಸಂಪನ್ಮೂಲಗಳೊಂದಿಗೆ ರಂಜನಿಯವಾಗಿದೆ. ಮೀನುಗಾರಿಕೆಗೆ ವಿಪುಲ ಅವಕಾಶ ಇರುತ್ತವೆ. ಜೊತೆಗೆ ೮೦೦೦ ಹೆ.ನಷ್ಟು ಓಸ್ನೀರು ಪ್ರದೇಶವು ಸಿಗಡಿ/ಮೀನು ಕೃಷಿಗೆ ಒಳ್ಳೆಯ ಅವಕಾಶವನ್ನು ಒದಗಿಸುತ್ತದೆ. ರಾಜ್ಯದಲ್ಲಿ ಸುಮಾರು ೯.೬೧ ಲಕ್ಷ ಮೀನುಗಾರರಿದ್ದು, ಕರಾವಳಿಯಲ್ಲಿ ೩.೨೮ ಲಕ್ಷ ಹಾಗೂ ಒಳನಾಡಿನಲ್ಲಿ ೬.೩೩ ಲಕ್ಷ ಮೀನುಗಾರರು ವಿವಿಧ ಮೀನುಗಾರಿಕೆ ಚಟುವಟಿಕೆಗಳಲ್ಲಿ ತೊಡಗಿಸಿದ್ದಾರೆ. ರಾಜ್ಯದ ೨೦೧೩-೧೪ನೇ ಸಾಲಿನ ಒಟ್ಟು ಮೀನು ಉತ್ಪಾದನೆಯು ೫.೬೮ ಲಕ್ಷ ಹೆ. ಗಳಷ್ಟಾಗಿದೆ. ರಾಜ್ಯದ ಈಗಿನ ಒಟ್ಟು ಉತ್ಪಾದನೆಯು ಶೇಕಡ ೫.೮ ಹೆ. ರಷ್ಟಾಗಿದೆ. ರಾಷ್ಟ್ರದ ಮೀನು ಉತ್ಪಾದನೆಗೆ ಹೋಲಿಸಿದಾಗ ಕರ್ನಾಟಕವು ಕರಾವಳಿ ಮೀನು ಉತ್ಪಾದನೆಯಲ್ಲಿ ೭ನೇ ಸ್ಥಾನ ಮತ್ತು ಒಳನಾಡು ಉತ್ಪಾದನೆಯಲ್ಲಿ ೬ನೇ ಸ್ಥಾನ ಪಡೆದಿದೆ. ಮೀನುಗಾರಿಕೆಯು ವಿದೇಶಿ ವಿನಿಮಯ ಹಾಗೂ ಉದ್ಯೋಗವಕಾಶದ ಸೃಷ್ಟಿಯ ಮೂಲವಾಗಿರುವುದರಿಂದ ದೇಶದ ಆರ್ಥಿಕ ಪ್ರಗತಿಯಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದೆ. ಇದರ ಜೊತೆಗೆ ಈ ವಲಯವು ಕೈಗಾರಿಕಾ ಉದ್ದಿಮೆಯ ಸ್ವರೂಪವನ್ನು ಸಹ ಹೊಂದಿದೆ. ಮಾನವನ ಆಹಾರದಲ್ಲಿ ಮೀನು ಕಡಿಮೆ ಬೆಲೆಯ ಪ್ರೋಟೀನ್ ಮೂಲವಾಗಿದೆ. ಮೀನುಗಾರಿಕೆ ಇಲಾಖೆಯನ್ನು ೧೯೫೭ನೇ ಇಸವಿಯಲ್ಲಿ ರಾಜ್ಯದಲ್ಲಿರುವ ಕರಾವಳಿ ಮತ್ತು ಒಳನಾಡು ವಲಯದ ಸಂಪನ್ಮೂಲ ಉಪಯೋಗಿಸಿ ರಾಜ್ಯದ ಮೀನು ಉತ್ಪಾದನೆಯನ್ನು ಹೆಚ್ಚಿಸುವ ಉದ್ದೇಶದಿಂದ ಸ್ಥಾಪಿಸಲಾಯಿತು. ಕರ್ನಾಟಕದಲ್ಲಿ ಸುಮಾರು ೫.೯೩ ಲಕ್ಷ ಹೇಕ್ಟೇರ್‌ಗಳಷ್ಟು ಒಳನಾಡು ಜಲಸಂಪನ್ಮೂಲ ೮೦೦೦ ಹೇಕ್ಟೇರ್ ಓಸ್ನೀರು ಪ್ರದೇಶ ಮತ್ತು ೨೭,೦೦೦ ಚದರ ಕಿ.ಮೀ. ಭೂಖಂಡ ಪ್ರದೇಶವನ್ನು ಹೊಂದಿದ ೩೨೦ ಕಿ.ಮೀ. ಉದ್ದದ ಕರಾವಳಿ ಪ್ರದೇಶ ಇರುತ್ತದೆ. ಮೀನುಗಾರಿಕೆ ಇಲಾಖೆಯು ಸಂಪನ್ಮೂಲಗಳ ಸದ್ಬಳಕೆಗಾಗಿ ಹಾಗೂ ಸಾರ್ವಜನಿಕರ ಒಳಿತಿಗಾಗಿ ಹಾಗೂ ಮೀನುಗಾರರ ಕಲ್ಯಾಣಕ್ಕಾಗಿ ಹಲವಾರು ಯೋಜನೆಗಳನ್ನು ಅನುಷ್ಠಾನಗೊಳಿಸಿದೆ. ರಾಜ್ಯದ ಮೀನು ಉತ್ಪಾದನೆ ಎಂಬತ್ತರ ದಶಕದ ಆರಂಭದಲ್ಲಿ ಸುಮಾರು ೨ ಲಕ್ಷ ಟನ್‌ಗಳಷ್ಟಿದ್ದು, ಅದು ತೊಂಬತ್ತರ ದಶಕದ ಮಧ್ಯದಲ್ಲಿ ಸುಮಾರು ೩ ಟನ್‌ಗಳಗೆರಿತ್ತು. ಕಳೆದ ಐದು ವರ್ಷಗಳ ಅವಧಿಯ ಸರಾಸರಿ ಮೀನು ಉತ್ಪಾದನೆಯು ಸುಮಾರು ೫.೬೫ ಲಕ್ಷ ಟನ್‌ಗಳಿಗೆ ಏರಿದೆ. ಇದರಲ್ಲಿ ಕರಾವಳಿಯ ಕೊಡುಗೆ ಶೇ.೬೬. ಹಾಗೂ ಒಳನಾಡಿನ ಕೊಡುಗೆ ಶೇ.೩೪ರಷ್ಟಿದೆ. ೨೦೧೩-೧೪ನೇ ಸಾಲಿನ ದೇಶದ ಒಟ್ಟು ಮೀನು ಉತ್ಪಾದನೆಯಲ್ಲಿ ರಾಜ್ಯದ ಕೊಡುಗೆ ಶೇ.೮೮ರಷ್ಟಿದೆ, ಒಳನಾಡು ಮೀನು ಉತ್ಪಾದನೆಯಲ್ಲಿ ೭ನೇ ಸ್ಥಾನ ಹಾಗೂ ಕರಾವಳಿಯಲ್ಲಿ ೬ನೇ ಸ್ಥಾನ ಹೊಂದಿದೆ. ರಾಜ್ಯದ ಪ್ರಸ್ತುತ ತಲಾ ಮೀನುಗಳ ಲಭ್ಯತೆ ೬.೮ ಕೆ.ಜಿ.ಯಷ್ಟಿದೆ. ರಾಜ್ಯದ ಒಟ್ಟು ಆಂತರಿಕ ಉತ್ಪಾದನೆಗೆ ಮೀನುಗಾರಿಕೆ ವಲಯದ ಕೊಡುಗೆ ೧೯೯೩-೯೪ರಲ್ಲಿ ರೂ.೧೬.೩೧೬ ಲಕ್ಷಗಳಷ್ಟಿದ್ದದ್ದು, ೨೦೧೨-೧೩ರಲ್ಲಿ ೨.೮೬.೨೭೩ ಲಕ್ಷಗಳಿಗೆ ಹೆಚ್ಚಿದೆ.

ರಾಜ್ಯದಲ್ಲಿ ಮತ್ಸ್ಯ ಉತ್ಪಾದನೆಯು ಅತಿ ಮುಖ್ಯವಾಗಿದೆ ಹಾಗೂ ನೈಸರ್ಗಿಕವಾಗಿ ಸಿಗುವ ಸಂಪತ್ತಾಗಿದೆ. ವಿಶಾಲವಾದ ಸಮುದ್ರ ಅದರ ಹಿನ್ನೀರು ಮತ್ತು ಸಿಹಿನೀರು ತಾಣಗಳು ಮೀನು ಉತ್ಪಾದನಾ ಮೂಲಗಳಾಗಿವೆ. ಮೀನು ಮಾನವನಿಗೆ ಅತಿ ಮುಖ್ಯವಾಗಿ ಬೇಕಾಗುವ ಪೌಷ್ಠಿಕ ಆಹಾರವನ್ನು ಒದಗಿಸುವುದರಲ್ಲದೆ. ಮೀನಿನ ದೇಹದಿಂದ ಎಣ್ಣೆ, ಶಾರ್ಕ್ ಲಿವರ್ ಆಯಿಲ್, ಮೀನು ಹುಡಿ, ಮೀನಿನ ಮೇದ್ಹೋಜಿರಕ ಗ್ರಂಥಿಯಿಂದ ಇನ್‌ಸೂಲಿನ್ ತಯಾರಿಕೆ ಮುಂತಾದ ಉಪ ಪದಾರ್ಥಗಳನ್ನು ತಯಾರಿಸಲಾಗುತ್ತದೆ. ಮೀನನ್ನು ರಫ್ತು ಮಾಡಿ ವಿದೇಶಿ ವಿನಿಮಯವನ್ನು ಸಂಪಾದಿಸುವುದಲ್ಲದೆ ಸಹಾಸ್ರಾರು ಜನರಿಗೆ ಉದ್ಯೋಗವನ್ನು ಕಲ್ಪಿಸುತ್ತಿದೆ. ಕ್ರಿಮೀ ಕೀಟಗಳ ನಿರ್ಮೂಲನೆಗೆ ಮತ್ತು ಮನಸ್ಸಿನ ಉಲ್ಲಾಸಕ್ಕೆ ಮೀನನ್ನು ಬಳಸುತ್ತಾರೆ.

ರಾಜ್ಯದಲ್ಲಿ ಮೀನುಗಾರಿಕೆಯ ಅಭಿವೃದ್ಧಿ ದೃಷ್ಟಿಯಿಂದ ೧೯೫೬ರಲ್ಲಿ ಒಳನಾಡ ಸಂಪನ್ಮೂಲಗಳಿಗೆ ಸೀಮಿತವಾಗುವಂತೆ ಮತ್ಸ್ಯ ಸಂಪತ್ತಿನ ಸಮೀಕ್ಷೆಯನ್ನು ೧೯೪೨ರಲ್ಲಿ ನಡೆಸಲಾಯಿತು. ಈ ಸಮೀಕ್ಷೆ ಅಂದಿನ ಮೀನುಗಾರಿಕಾ ಅಧಿಕಾರಿಗಳಾದ ಡಾ.ಭೀಮಾಚಾರ್‌ರವರ ನೇತೃತ್ವದಲ್ಲಿ ನಡೆಯಿತು. ಮೀನುಗಾರಿಕ ಅಭಿವೃದ್ಧಿಗೆ ಸೂಕ್ತ ರೂಪುರೇಶೆಗಳನ್ನು ಅವರು ಸಿದ್ಧಪಡಿಸಿದರು. ಇದರಂತೆ ಅಂದಿನ ಮಹಾರಾಜರು ಕೇಂದ್ರ ಸರಕಾರದ ೧೯೦೧ರ ಮೀನುಗಾರಿಕ ಅಧಿನಿಯಮದ ಪ್ರಕಾರ ಗೇಮ್ ಅಂಡ್ ಫೀಶ್ ಆಕ್ಟನ್ನು ಜಾರಿಗೆ ತಂದರು. ಕಾನೂನು ಅನ್ವಯದಂತೆ ಮೀನು ಸಂರಕ್ಷಣೆಗೆ ಬೇಕಾದ ಕ್ರಮಗಳನ್ನು ತೆಗೆದುಕೊಳ್ಳಲು ಇದು ಸಹಾಯ ಮಾಡಿತು. ಅಂದರೆ ಸೂಕ್ಷ್ಮ ಪ್ರದೇಶಗಳಲ್ಲಿ ಮೀನು ಹಿಡಿಯುವುದನ್ನು ನಿಷೇಧಿಸಲಾಯಿತು ಮತ್ತು ಮೀನು ಸಂರಕ್ಷಣ ದೃಷ್ಟಿಯಿಂದ ಮೀನು ಹಿಡಿಯಲು ಮೀನುಗಾರರು ಪರವಾನಿಗೆಗಳನ್ನು ಪಡೆದು ನಿರ್ದಿಷ್ಟ ಪ್ರದೇಶಗಳಲ್ಲಿ ಮತ್ತು ನಿರ್ದಿಷ್ಟ ಸಮಯದಯೊಳಗೆ ಮಾತ್ರ ಮೀನು ಹಿಡಿಯಲು ಅವಕಾಶ ಕಲ್ಪಿಸಲಾಯಿತು. ಸ್ಥಳೀಯ ಮೀನುಗಳ ಜೊತೆಗೆ ಪಾಲನೆಗಾಗಿ ಶೀಘ್ರವಾಗಿ ಬೆಳೆಯುವ ದೊಡ್ಡಗೆಂಡೆ ಜಾತಿಯ ಮೀನು ಮರಿಗಳನ್ನು ಕಲ್ಕತ್ತಾದಿಂದ ತರಿಸಿ ಕೆರೆ, ಜಲಾಶಯಗಳಲ್ಲಿ ಭಿತ್ತಿ ತನ್ಮೂಲಕ ಒಳನಾಡ ಮೀನು ಉತ್ಪತ್ತಿ ಹೆಚ್ಚಿಸಲು ಪ್ರಯತ್ನ ಮಾಡಿದರು. ಮೀನು ಸಂಶೋಧನೆಗಾಗಿ ಕೃಷ್ಣರಾಜ ಸಾಗರದಲ್ಲಿ ಒಂದು ಸಂಶೋಧನಾ ಕೇಂದ್ರವನ್ನು ಸ್ಥಾಪಿಸಲಾಗಿತ್ತು. ಮೊಟ್ಟ ಮೊದಲಿಗೆ ಶಿಕಾರಿಪುರದ ಸಮುದಾಯ ಅಭಿವೃದ್ಧಿ ಬ್ಲಾಕ್‌ನ ಕೆರೆಗಳಲ್ಲಿ ಮತ್ಸ್ಯಾಭಿವೃದ್ಧಿಗೆ ಹೆಚ್ಚಿನ ಒತ್ತು ಕೊಡಲಾಯಿತು.

**ಕಡಲ ತೀರದ ಮೀನುಗಾರಿಕೆ ಸಂಪನ್ಮೂಲಗಳು**

ದೇಶದ ಶೇಕಡ ೫ ಭಾಗದಷ್ಟು ಕಡಲ ತೀರವನ್ನು ನಮ್ಮ ರಾಜ್ಯ ಹೊಂದಿದೆ. ಮೀನು ಉತ್ಪಾದನೆಯಲ್ಲಿ ಶ್ರೀಮಂತ ಪ್ರದೇಶವೆಂದು ಗುರುತಿಸಿಕೊಂಡಿದೆ. ಈ ಪ್ರದೇಶದಿಂದ ವಾರ್ಷಿಕ ಸುಮಾರು ೪.೨೫ ಲಕ್ಷ ಟನ್ ಮೀನನ್ನು ಉತ್ಪಾದಿಸಬಹುದೆಂದು, ಅದರಲ್ಲಿ ೭೦ ಮೀಟರ್ ಕಡಲ ತೀರದಿಂದ ೨.೨೫ ಲಕ್ಷಟನ್ ಮತ್ತು ಆಳ ಸಮುದ್ರದಿಂದ ೨ ಲಕ್ಷಟನ್ ಮೀನನ್ನು ಉತ್ಪಾದಿಸಬಹುದೆಂದು ಅಂದಾಜು ಮಾಡಲಾಗಿದೆ. ಜೂನ್ ತಿಂಗಳನಿಂದ ಸೆಪ್ಟಂಬವರೆಗೆ ಸುರಿಯುವ ಮುಂಗಾರು ಮಳೆ, ಅಕ್ಟೋಬರ್‌ನಿಂದ ಡಿಸೆಂಬರ್‌ವರೆಗೆ ಬೀಳುವ ಹಿಂಗಾರು ಮಳೆ ರಾಜ್ಯದ ಕರಾವಳಿ ಮೀನುಗಾರಿಕೆಯ ಮೇಲೆ ಪರಿಣಾಮ ಬೀರುತ್ತದೆ.

ನಮ್ಮ ಕರಾವಳಿಯಲ್ಲಿ ಸುಮಾರು ೩೦೦ಕ್ಕೂ ಹೆಚ್ಚು ಮೀನು ಪ್ರಭೇದಗಳು ಸಮೀಕ್ಷೆ ನಡೆಸಿದಾಗ ಸಿಕ್ಕಿದೆ. ಸಾಮಾನ್ಯವಾಗಿ ಹಿಡಿಯುವ ಮೀನುಗಳೆಂದರೆ: ತಾಟೆ(ಖುಚಿಡಿಇ), ತೋರಕೆ ಸ್ರೂರಕೆ(ಖಇಚಿಣಜ ಚಿಟಜ ಡಿಚಿಥಿ), ಬೈಗೆ, ಭೂತಾಯಿ(ಖಚಿಡಿಜುಟಜ), ಕೊಲ್ಲತರ(ಂಟಛಿಖಿತುಜ), ಬಂಗುಡೆ (ಒಚಿಛಿಇಜಡಿಜಟ), ಅಂಜಿಲ್(ಖಜಜಡಿ), ಕೇದಾರ(ಖಿಣಟಚಿ), ಮಾಂಜಿ(ಕಿಂಟಜಿಡಿಜಣ), ಅಡೆ(ಐಚಿಛಿಣಚಿಡಿಣ), ಗೋಂಡ್ಲು, ಕೋಡಂಡೆ(ಅಚಿಡಿಚಿಟರುಜ), ಕುರ್ಚಿ(ಖುಟತಜಡಿ ಛಜಟಟುಟಜ), ಕಲ್ಲೂರು(ಖಛಿಚಿಜಟುಫ), ಪಾಂಬೋಲ್(ಖುಫಛಿಂಟ ಈಖು), ಚಪ್ಪಟೆ(ಈಟಚಿಣ ಜಖು), ತೇಡೆಸೇಡೆ(ಅಜಿಣ ಜಖು), ಹಾವು ಮೀನು(ಇಜಟ), ಮದ್ಮಲ್(ಕುಟಇ ಶಿಜಡಿಛಿ), ಸೀಗಡೆ ಎಟ್ಟೆ(ಕಡಿಚಿತಿಟ), ಚಿಪ್ಪು, ಮರವಾಯಿ(ಖುಜಟಟ), ಜೋಂಡಾಸ್ (ಖಡಣುಫ ಚಿಟಜ ಆಣಣಣಟಜ ಜಖು), ಪುಚ್ಚೆಮೀನು(ಖಡಣುಟಟಚಿ), ಏಡಿ(ಅಡಿಚಿಛ).

**ಹಿನ್ನೀರಿನ ಮತ್ಸ್ಯ ಸಂಪತ್ತು**

ಹಿನ್ನೀರು ಪ್ರದೇಶ ೮,೦೦೦ ಹೆಕ್ಟೇರುಗಳಷ್ಟಿವೆ. ಸೀಗಡಿ/ಮೀನು ಕೃಷಿಗೆ ಸುಮಾರು ೪.೨೦೦ ಹೆಕ್ಟೇರ್ ಪ್ರದೇಶವು ಯೋಗ್ಯವೆಂದು ಸಮೀಕ್ಷೆಗಳಿಂದ ತಿಳಿದುಬಂದಿರುತ್ತದೆ ಈ ಮೀನು ಕೃಷಿಯನ್ನು ಸಂಪ್ರಾದಾಯಿಕ ಕೃಷಿ ಜಮೀನಿನಲ್ಲಿ ಬೆಳೆಸುತ್ತಾರೆ. ಸಮುದ್ರದ ಉಬ್ಬರಗಳಲ್ಲಿ ಬರುವ ನೀರನ್ನು ಉಪಯೋಗಿಸಿ ಕೃಷಿ ಮಾಡುವುದರಲ್ಲದೆ. ಅದರ ಜೊತೆ ಜೊತೆಗೆ ಬರುವ ಮೀನನ್ನು ಹೊರಹೋಗದಂತೆ ತಡೆದು ಅಲ್ಲೇ ಮೀನು ಕೃಷಿ ಮಾಡುತಾರೆ ಇದರಲ್ಲಿ ಸೀಗಡಿ ಸಹ ಒಂದು.

೩-೪ ತಿಂಗಳುಗಳ ಕಾಲ ಫಸಲಿನೊಂದಿಗೆ ಬೆಳೆಯುವ ಫಸಲು ಕಟಾವಾದ ಮೇಲೆ ಈ ಮೀನುಗಳನ್ನು ಮಾರಾಟ ಮಾಡುತ್ತಾರೆ. ಇದು ಲಾಭದಾಯಕವಾಗಿದೆ. ಆಧುನಿಕ ಮೀನು ಕೃಷಿ ೧೯೦೦ರ ಈಚೆಗೆ ಆರಂಭವಾಯಿತು. ನೀರಿನಲ್ಲಿ ಆಮ್ಲಜನಕ ಹೆಚ್ಚಿಸಲು ಫೆಡಲ್ ಬೋಟುಗಳ ಬಳಕೆ. ರೋಗ ರುಜಿನಗಳು ಬಾರದಂತೆ ನೋಡಿಕೊಂಡರೆ ಉತ್ತಮ ಸಿಗಡಿ ಮೀನು ಉತ್ಪಾದನೆ ಮಾಡಲು ಸಾಧ್ಯ. ಇದರಿಂದ ೨ರಿಂದ ೫ ಟನ್‌ವರೆಗೆ ಸಿಗಡಿ ಮೀನು ಉತ್ಪಾದಿಸುತ್ತಾರೆ. ಹಿನ್ನೀರಿನ ಸಂಪನ್ಮೂಲಗಳಲ್ಲಿ ಸೀಗಡಿ(ಕಡಿಚಿತಿಟ), ಕಾಣೆ, ಕಂಡಿಕೆ (ಐಚಿಜಥಿ ಜಖು), ಮಾಲ(ಒಣಟಟಜಣ), ಪೈಯಿ, ಬೈಂಗೆ(ಉಜಡಿಡುಜ), ಕರಿ, ಇರಿ(ಇಣಡಿರಿಶಿಟಣ) ಮೀನು ಗಳಿರುತ್ತವೆ.

ಒಳನಾಡು ಮೀನುಗಾರಿಕೆ: ರಾಜ್ಯದಲ್ಲಿ ಒಳನಾಡು ಮೀನುಗಾರಿಕೆಯು ೫.೨೦ಲಕ್ಷ ಹೆಕ್ಟೇರುಗಳಷ್ಟು ವಿಸ್ತೀರ್ಣವನ್ನು ಹೊಂದಿದೆ. ಇವುಗಳಲ್ಲಿ ೨೫.೮೮೨ ಕೆರೆಗಳು. ೨.೯೨ಲಕಷ ಹೆಕ್ಟೆರ್ ವಿಸ್ತೀರ್ಣವನ್ನು ೭೪ ಜಲಾಶಯಗಳು ೨.೨೭ಲಕ್ಷ ಹೆಕ್ಟೆ ವಿಸ್ತೀರ್ಣವೂ ಸೇರಿವೆ. ಅಲ್ಲದೆ ೫.೮೧೩ ಕಿ.ಮೀ.ಉದ್ದದ ನದಿಗಳು. ಒಂದು ಲಕ್ಷ ಕಿ.ಮೀ. ಉದ್ದದ ನಾಲೆಗಳೂ ಇವೆ. ಸುಮಾರು ೫.೭೭.೮೪೭ ಒಳನಾಡು ಮೀನುಗಾರರು ಇದ್ದು. ಇವರಲ್ಲಿ ೧.೧೨.೫೮೭ ಮೀನುಗಾರರ ಮೀನು ವೃತ್ತಿಯಲ್ಲಿ ತೊಡಗಿರುತ್ತಾರೆ.

ಒಳನಾಡು ಮೀನು ಕೃಷಿಯಿಂದ ೩ರಿಂದ ೪ ಲಕ್ಷ ಟನ್ ಮೀನು ಉತ್ಪತ್ತಿ ಮಾಡಬಹುದೆಂದು ಅಂದಾಜು ಮಾಡಲಾಗಿದೆ. ಇದು ಕ್ರಮವಾಗಿ ೧೯೫೬-೫೭ರಲ್ಲಿ ಮೀನಿನ ಉತ್ಪತ್ತಿ ೨೦.೦೦೦. ಟನ್‌ಗಳಿದ್ದು. ೧೯೬೬-೬೭ಕ್ಕೆ ೪೩.೦೦೦ ಟನ್‌ಗಳಾಗಿ, ೧೯೯೭-೯೮ರಲ್ಲಿ ೧.೨೭.೪೬೮ ಟನ್‌ಗಳಿಗೆ ಹೆಚ್ಚಿತು. ಆದರೆ ಹಿಂದಿನ ೩ ವರ್ಷಗಳಿಂದ ಮಳೆಯ ಪ್ರಮಾಣ ಕಡಿಮೆಯಾಗಿರುವುದರಿಂದ ಉತ್ಪತ್ತಿ ಕಡಿಮೆಯಾಗಿದೆ. ಅದು ಸುಮಾರು ೮೦.೦೦೦ಟನ್‌ಗಳನ್ನು ನಿಂತಿತು ಈಗ ಸುಧಾರಿಸಿದೆ.

ಒಳನಾಡು ಮೀನುಗಾರಿಕೆಯು ೧೯೪ ಸ್ಥಳಿಯ ಮೀನಿನ ಪ್ರಭೇದಗಳನ್ನು ಹೊಂದಿದೆ. ಅವುಗಳು ಬಾಳೆ(ಘಚಿಟಟಚಿರಿಂ), ಗೊದ್ದಲೆ(ಔಟಿರಿಚಿಞ, ಛಿಟಚಿಭಿಣಟಣಾ), ತುರಗಿ,ಗಿರ್ಲು(ಛಿಣಾ),ಚೇಳುಮೀನು(ಊಜಣಜಡಿಂಠಿಜಟಜಣಾಣಜ ಜಥಿಟಟಘ), ಆನೆಮೀನು ಮುರಗೋಡು(ಅಟಚಿಡಿಙಾ ಛಿಚಿಣಡಿಚಿಭಿಙಾ), ಕಮ್ಮೀನು(ಐಚಿಭಜಂ), ಅರ್ಜ(ಉಡಿಡಿಝಛಿಚಿ), ಕಳಜ(ಕಣಟಣುಣಾಿ), ಹರಗಿ(ಕಣಟಭಿಜಟಟಣಾ), ಬಿಳಿಮೀನು (ಒಷ್ಚಿಜಜಡಿ),ಸಸ್ಲು(ಖಥಛತಠಡಿಚಿ),ಚಪ್ಪಲಿಮೀನು(ಓಜಣಠಿಣಜಡಿಣಾ), ಕುಚ್ಚು, ಕೊರವ, ಅವಲು (ಒಣಾಡಿಡಿಜಛ), ನೆತ್ತಿಕಣ್ಣು ಕೊರವ(ಊಚಥಿಠ ರಠಛಿಣಾ ,ಠಿ) ಮುಂತಾದವುಗಳು. ಉತ್ತರ ಇಂಡಿಯಾ ನದಿಗಳ ಮೀನುಗಳಾದ ಕಟ್ಲಾ(ಅಚಿಣಟಚಿ), ರೋಹಲ(ಖಠಿಙಣ), ಮೈಗಾಲು(ಒಡಿರಿಜಿಟ ಮತ್ತು ವಿದೇಶಿ ತಳಿಗಳಾದ ಸಾಮಾನ್ಯಗೆಂಡೆ(ಅಠಟಟಠಟ ಅಚಿಡಿಠಿ), ಹುಲ್ಲುಗೆಂಡೆ(ಉಡಿಫ ಛಿಜಡಿಠಿ), ಬೆಳ್ಳಗೆಂಡೆ(ಖಿಟತಜಡಿ ಛಿಜಿಡಿಠಿ),ಜಿಲೇಬಿ ಮೀನು(ಖಿಟಚಿರುಚಿ)ಗಳನ್ನು ಕಾಣಬಹುದು.

ಕೆರೆ ಕೊಳಗಳಲ್ಲಿ ೧೯೫೭ರ ದಶಕದಲ್ಲಿ ೧೦-೧೫ ಕಿ.ಗ್ರಾಂ. ತೂಕದ ಸ್ಥಳೀಯ ಮೀನುಗಳನ್ನು ೧೯೫೦ರ ದಶಕದಿಂದೀಚೆಗೆ ಶೀಘ್ರವಾಗಿ ಬೆಳೆಯುವ ಮೀನು ಮರಿಗಳನ್ನು ಬಿತ್ತಿ ಮೀನು ಉತ್ಪತ್ತಿಯನ್ನು ಹೆಚ್ಚಿಸಲು ಕ್ರಮ ತೆಗೆದುಕೊಳ್ಳಲಾಯಿತು. ವೈಜ್ಞಾನಿಕವಾಗಿ ಒಂದು ಹೆಕ್ಟೇರ್ ಕೊಳದಲ್ಲಿ ೧೦ ತಿಂಗಳ ಅವಧಿಯಲ್ಲಿ ೧೦ ಟನ್‌ಗಿಂತಲೂ ಹೆಚ್ಚು ಮೀನು ಉತ್ಪತ್ತಿ ಮಾಡಬಹುದಾಗಿದೆ.

**ಕಡಲಮೀನುಗಾರಿಕೆ**

ಸಾಂಪ್ರದಾಯಿಕವಾಗಿ ಹಾಯಿದೋಣಿಗಳ ಸಹಾಯದಿಂದ ವಿವಿಧ ಬಗೆಯ ಮೀನುಗಳನ್ನು ಹಿಡಿಯುವ ಸಾಧನಗಳನ್ನು ಬಳಸಿ ಕಡಲ ತಡಿಯ ಮೀನುಗಾರರು ತಮ್ಮ ವೃತ್ತಿಯಲ್ಲಿ ತೊಡಗುತ್ತಾರೆ. ಸಂಪರ್ಕದ ಕೊರತೆ ಇರುವುದರಿಂದ ದೂರ ಪ್ರದೇಶದ ಮೀನು ಮಾರಾಟಕ್ಕೆ ತೊಡಕಾಗಿದೆ. ಹಸಿ ಮೀನಿಗೆ ಉಪ್ಪನ್ನು ಸಿಂಪಡಿಸಿ ಬಿಸಿಲಿನಲ್ಲಿ ಒಣಗಿಸಿ ಹದ ಮಾಡಿ ಒಣ ಮೀನು ಮಾರಾಟ ಮಾಡುತ್ತಾರೆ. ವಿದೇಶಗಳಿಗೆ ರಫ್ತನ್ನು ಕೂಡ ಮಾಡುತ್ತಾರೆ. ಮೀನನ್ನು ಆಗಿನವರು ದೂರದ ಬೊಂಬಾಯಿಗೆ ದೋಣಿಗಳ ಮೂಲಕವೇ ಕಳಿಸುತ್ತಿದ್ದರು.

೧೯೬೦ರ ದಶಕದಲ್ಲಿ ಯಾಂತ್ರಿಕತೆ ಬೆಳವಣಿಗೆಯಾಗಿ ಮೀನುಗಾರಿಕೆ ನವೀಕೃತಗೊಂಡಿತು. ಈ ವಿಧಾನದಿಂದ ಹೆಚ್ಚು ಹೆಚ್ಚು ಮೀನುಗಳ ಸಂಗ್ರಹಣೆ ಸಾಧ್ಯವಾಯಿತು. ಮೊಟ್ಟ ಮೊದಲಿಗೆ ಯಾಂತ್ರಿಕ ದೋಣಿಗಳ ಬಳಕೆ ನೈಲಾನ್ ಬಲೆಗಳ ಬಳಕೆ ಸಂಪರ್ಕ ವ್ಯವಸ್ಥೆ, ರವಾನೆ ಸಾಧನಗಳು, ಮೀನನ್ನು ಮಂಜುಗಡ್ಡೆಯಲ್ಲಿ ಶೇಖರಿಸಿಡುವುದು, ಹಸಿ ಮೀನು ಮಾರಾಟ, ಸಂಸ್ಕರಿಸಿದ ಮೀನು, ಸೀಗಡಿಗಳನ್ನು ವಿದೇಶಗಳಿಗೆ ರಫ್ತು ಮಾಡುವಲ್ಲಿ ಯಶಸ್ವಿಯಾಯಿತು. ಈ ಮೂಲಕ ಯಾಂತ್ರಿಕ ಮೀನುಗಾರಿಕೆ ಆರಂಭವಾಯಿತು. ಯಂತ್ರಯುಕ್ತ ದೋಣಿಗಳ ಬಳಕೆಯಿಂದ ಅಲ್ಲಲ್ಲಿ ತಂಗುದಾಣಗಳನ್ನು ನಿರ್ಮಿಸಿ, ಮೀನು ಸಂಸ್ಕರಿಸುವ, ಮೀನು ಹುಡಿ ಮಾಡುವ, ಮೀನು ಬಲೆ ತಯಾರಿಸುವ ಘಟಕಗಳನ್ನು ನಿರ್ಮಿಸಿದರು. ಇದಕ್ಕೆ ರಾಜ್ಯ ಹಾಗೂ ಕೇಂದ್ರ ಸರಕಾರಗಳ ಅನುದಾನ ಹೇರಳವಾಗಿ ಸಿಕ್ಕಿದೆ. ಇದರ ಅಭಿವೃದ್ಧಿಗೆ ಇಲಾಖೆಯ ಹಲವು ಯೋಜನೆಗಳು ನೇರವಾಗಿವೆ. ಅವುಗಳಲ್ಲಿ ಪ್ರಮುಖವಾದವು.

**೧. ಮೀನುಗಾರಿಕೆ ಬಲೆಗಳು**

ಎಳೆ ಬಲೆ, ಕಂಡ್ಲ ಬಲೆ, ಬೀಸು ಬಲೆ, ಚೀಲದೆ ಬಲೆ, ಗಾಣ, ದವಣಿಗಾಣ ಮೊದಲಾದವು. ಇವುಗಳು ನಾಡ ದೋಣಿಗಳ ಸಹಾಯದಿಂದ ಮೀನು ಹಿಡಿಯಬಹುದಾಗಿದೆ. ರಾಜ್ಯದಲ್ಲಿ ಸುಮಾರು ೩೮.೪೭೬ ವಿವಿಧ ಬಲೆಗಳು ಸಿಕ್ಕಿವೆ. ಅವುಗಳೆಂದರೆ

**ರಂಪಣಿ ಬಲೆ**

ಈ ಬಲೆಯು ಅತಿ ದೊಡ್ಡದಾಗಿದ್ದು, ಹಲವಾರು ಜನ ತಂಡ ತಂಡದಲ್ಲಿ ಈ ಬಲೆಯನ್ನು ಉಪಯೋಗಿಸಿ ಕಾರ್ಯನಿರ್ವಹಿಸುತ್ತಾರೆ. ಮೀನುಗಾರರು ಪ್ರತಿದಿನ ತಮ್ಮ ಶಕ್ತಿಗೆ ಅನುಸಾರ ಬಲೆಯ ಕೆಲವು ಭಾಗಕ್ಕೆ ಒಡೆಯರಾಗುತ್ತಿದ್ದರು. ಅಧಿಕ ಜನ ಈ ಬಲೆಯನ್ನು ನಿಯಂತ್ರಿಸಲು ಬೇಕಾಗುತ್ತದೆ. ಈ ಬಲೆಯ ಮೇಲ್ವಿಚಾರಣೆಯ ಮೀನುಗಾರ ಹಿರಿಯನನ್ನು 'ತಾಂಡೇಲ್' ಎಂದು ಕರೆಯುತ್ತಿದ್ದರು. ಈ ರೀತಿಯಾದ ಬಲೆಯನ್ನು ಸೆಣಬು ಮತ್ತು ಹತ್ತಿಯ ದಾರದಿಂದ ತಯಾರಿಸಿ ಅದನ್ನು ಹದ ಮಾಡಿ ಉಪಯೋಗಿಸುತ್ತಾರೆ.

ಬಲೆಯ ಕೊನೆಯ ಭಾಗಕ್ಕೆ ೨೦೦ ರಿಂದ ೩೦೦೦ಫ್ಯಾದಂ ಉದ್ದದ ೩ ಇಂಚು ದಪ್ಪವಿರುವ ತೆಂಗಿನ ನಾರಿನ ಹಗ್ಗವನ್ನು ಜೋಡಿಸಿ ಬಲೆಯನ್ನು ಎಳೆಯಲು ಬಳಸುತ್ತಾರೆ. ಇದು ಮುಖ್ಯವಾಗಿ ಬಂಗುಡೆ, ಭೂತಾಯಿ ಮತ್ತಿತರ ಗುಂಪು ಮೀನುಗಳ ತೆಪ್ಪಗಳು ಸಮುದ್ರದಲ್ಲಿ ಕಾಣಿಸಿಕೊಂಡಾಗ, ದೋಣಿಗಳಲ್ಲಿ ಬಲೆಯನ್ನು ಹೇರಿಕೊಂಡು ಒಂದು ಬದಿಯನ್ನು ಆರಂಭದ ಸಹಾಯಕರಿಗೆ ಕೊಟ್ಟು ಮೀನಿನ ತೆಪ್ಪಲುಗಳನ್ನು ಸುತ್ತುವರಿದು ಬಲೆಯನ್ನು ನೀಳವಾಗಿ ನಿಲ್ಲಿಸಲು ಒಂದು ದೋಣಿಯನ್ನು ಆಳದ ನೀರಿಗೆ ನಿಲ್ಲಿಸುತ್ತದೆ. ಮತ್ತೊಂದು ದೋಣಿಯ ಸಹಾಯದಿಂದ ಬಲೆಯ ಮತ್ತೊಂದು ತುದಿಯನ್ನು ದಡಕ್ಕೆ ತಂದು ಎರಡು ತುದಿಗಳಿಂದ ಬಲೆಯನ್ನು ಎಳೆದು ಬಲೆಯಲ್ಲಿ ಸಿಕ್ಕಿ ಹಾಕಿಕೊಂಡಿರುವ ಮೀನುಗಳನ್ನು ಏಕಾಏಕಿಯಾಗಿ ಉಪಯೋಗಿಸದೆ ತಮಗೆ ಬೇಕಾದಷ್ಟು ಮೀನುಗಳನ್ನು ಮಾತ್ರ ತೆಗೆದು ಉಳಿದು ಮೀನುಗಳನ್ನು ಸಮುದ್ರದಲ್ಲಿ ಇಟ್ಟು ಅವಶ್ಯಕತೆ ಬಿದ್ದಾಗ ಮಾತ್ರ ತೆಗೆಯುತ್ತಾರೆ. ತೆಗೆದ ಮೀನುಗಳು ಒಂದು ಸಲಕ್ಕೆ ೧೦೦ ಟನ್‌ಗಳಷ್ಟಾಗಿರುವ ನಿರ್ದಶನಗಳೂ ಇವೆ.

೧೯೫೨ರ ಹೊತ್ತಿಗೆ ಉತ್ತರ ಕನ್ನಡ ಜಿಲ್ಲೆಯಲ್ಲಿ ೫೭ ರಂಪಣಿ ಬಲೆಗಳು, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೨೦೦ ರಂಪಣಿ ಬಲೆಗಳು ಇದ್ದವೆಂದು ವರದಿ ಇದೆ. ೧೯೭೬ರ ಇಸವಿಯಿಂದ ಇವುಗಳ ಸಂಖ್ಯೆ ಇಳಿಮುಖವಾಯಿತು.

**ಪರ್ಸಿಯನ್ ಬಲೆಗಳು**

ಈ ಬಲೆಗಳ ಆವಿಷ್ಕಾರ ಸುಮಾರು ೧೯೭೮ರ ಹೊತ್ತಿಗೆ ರಾಜ್ಯದ ಕರಾವಳಿಯಲ್ಲಿ ಆಯಿತು. ಗುಂಪು ಮೀನುಗಳ ತೆಪ್ಪಲನ್ನು ಹಿಡಿಯಲು ಇದು ಸಹಾಯಕ.

**ಬಲೆಗಳ ಉತ್ಪಾದನೆ**

ಮೊದಲಿಗೆ ಬಲೆಗಳನ್ನು ಹತ್ತಿ ನೂಲಿನಿಂದ ಮತ್ತು ಸೆಣಬಿನಿಂದ ಸ್ವತಹ ಮೀನುಗಾರರೇ ತಯಾರಿಸುತ್ತಿದ್ದರು. ಹಗ್ಗ, ತಲೆಬುರುಡಿ, ಮುಳುಗುಬಾರಗಳನ್ನು ಮಾರಾಟಗಾರರಿಂದ ಪಡೆಯುತ್ತಿದ್ದರು. ೧೯೫೮ರ ಹೊತ್ತಿಗೆ ನೈಲಾನ್, ಪಾಲಿಪ್ರೋಪೈಲೀನ್‌ಗಳಿಂದ ರಚಿಸಿದ ಬಲೆಗಳಲ್ಲಿ ಮೀನು ಹಿಡಿಯುತ್ತಿದ್ದರು. ದಾರಗಳನ್ನು, ಹಗ್ಗಗಳನ್ನು ತಯಾರಿಸಲು ಮುಂದಾದರು. ತುಂಗಾಭದ್ರ ಬೋರ್ಡಿನ ವತಿಯಿಂದ ನೈಲಾನ್ ಬಲೆಗಳನ್ನು ನೇಯುವ ಯಂತ್ರಗಳನ್ನು ಜಪಾನ್ ಬಲೆಗಳ ಬೇಡಿಕೆಗೆ ಅನುಗುಣವಾಗಿ ಬಲೆಗಳನ್ನು ನಿರ್ಮಿಸಿ ಮಾರಾಟ ಮಾಡಲಾಗುತ್ತಿತ್ತು. ಇದಕ್ಕೆ ಹೆಚ್ಚಿಗೆ ಬೇಡಿಕೆ ಇದ್ದು

ಖಾಸಗೀಕರಣಗೊಂಡಿತು. ನೈಲಾನ್ ಬಲೆಗಳನ್ನು ನಿರ್ಮಾಣ ಮಾಡಲು ಕಾರ್ಖಾನೆಗಳನ್ನು ನಿರ್ಮಿಸಲಾಯಿತು. ರಾಜ್ಯದಲ್ಲಿ ಇಂಥ ಮೂರು ರೀತಿಯ ಕಾರ್ಖಾನೆಗಳಿವೆ.

**ದೋಣಿಗಳ ವಿವಿಧ ಪ್ರಭೇದಗಳು**

**೧. ಸಾಂಪ್ರದಾಯಿಕ ದೋಣಿಗಳು**

ಮೀನುಗಾರರು ಮೊದಲಿಗೆ ನಾಡ ದೋಣಿಗಳನ್ನು ಬಳಸುತ್ತಿದ್ದರು. ಇದರಿಂದ ಸಾಧಾರಣ ಮೀನುಗಾರಿಕೆ ಸಾಧ್ಯವಾಗಿತ್ತು. ಇದು ತುಂಬಾ ಸರಳವಾಗಿ ಮರದ ಕೊರಡುಗಳಿಂದ ನಿರ್ಮಿತವಾಗಿತ್ತು. ೮ ರಿಂದ ೧೧ ಮೀಟರ್ ಉದ್ದವಿರುತ್ತಿತ್ತು. ಇದನ್ನು ಹುಟ್ಟುಗಳ ಸಹಾಯದಿಂದ ಪಟಗಳ ಸಹಾಯದಿಂದ ಚಲಿಸಲಾಗುತ್ತಿತ್ತು.

ಎಫ್.ಎ.ಓ. ಸಂಸ್ಥೆಯ ೨ನೇ ವಾರ್ಷಿಕ ಯೋಜನೆಯಲ್ಲಿ ಶ್ರೀ ವಾಲ್ ಜೇನರ್ ಮತ್ತು ಶ್ರೀ ಎಲುಗೂಸನ್ ಎನ್ನುವ ಇಂಜಿನಿಯರುಗಳ ಸಹಾಯವನ್ನು ರಾಜಕ್ಕೆ ಒದಗಿಸಿದ ಪರಿಣಾಮ ಕರಾವಳಿಗಳಲ್ಲಿ ಟ್ರಾಲ್ ದೋಣಿಗಳ ನಿರ್ಮಾಣವಾಯಿತು. ಕರಾವಳಿಯಲ್ಲಿ ಸಿಗಡಿ ಸಾಕಾಣಿಕೆಯ ಅರಿವು ಮೂಡಿತು. ೧೯೫೭-೫೮ರಲ್ಲಿ ಯಾಂತ್ರಿಕ ಟ್ರಾಲ್ ದೋಣಿಗಳ ಬಳಕೆ ಕರಾವಳಿಯಲ್ಲಿ ಆರಂಭವಾಯಿತು. ಇದರ ನಿರ್ಮಾಣಕ್ಕೆ ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ, ಮೀನು ಮಾರಾಟಗಾರರ ಮಹಾಮಂಡಳಗಳು ಆಗಿವೆ. "ಅಗ್ರಿಕಲ್ಚರ್ ರಿಫೈನಾನ್ಸ್ ಕಾರ್ಪೋರೇಷನ್"ನಿಂದ ಬೇಕಾದ ಸಾಲ ಪಡೆದು ವಿದೇಶಿ ಇಂಜಿನ್‌ಗಳಾದ ಯಾನ್ಮಾರ್ ಮತ್ತಿತರವುಗಳನ್ನು ಆಮದು ಮಾಡಿಕೊಂಡು ಜೋಡಿಸಲಾಯಿತು. ಇದರಲ್ಲಿ ತರಬೇತು ಹೊಂದಿದ ಮೀನುಗಾರ ಗುಂಪಿಗೆ ೫೦% ಮತ್ತು ಇಂಜಿನ್‌ಗೆ ೫೦% ಭಾಗ ಸಹಾಯಧನ ನೀಡಿ ಟ್ರಾಲ್ ದೋಣಿಗಳನ್ನು ವಿತರಣೆ ಮಾಡಲಾಯಿತು. ಆರಂಭದಲ್ಲಿ ಮೀನುಗಾರರು ಈ ಯಂತ್ರವನ್ನು ಹೆಚ್ಚಾಗಿ ಅವಲಂಭಿಲಿಲ್ಲ ಏಕೆಂದರೆ ಇದರ ಶಬ್ಧಕ್ಕೆ ಮೀನುಗಳು ಚದುರಿ ಹೋಗುತ್ತವೆ ಎನ್ನುವ ಅಭಿಪ್ರಾಯದಿಂದ ಹಿಂದೇಟು ಹಾಕುತ್ತಿದ್ದರು. ಬರಬರುತ್ತಾ ಈ ದೋಣಿಗಳು ತರುತ್ತಿದ್ದ ಯಥೇಚ್ಚ ಮೀನು/ಸಿಗಡಿಗಳನ್ನು ಕಂಡ ನಂತರ ಅವರ ಊಹೆ ಸುಳ್ಳೆಂದು ತಿಳಿದು, ಹೆಚ್ಚು ಹೆಚ್ಚು ಮೀನುಗಾರರು ಇದನ್ನು ಬಳಸಲು ಆರಂಭಿಸಿದರು.

ಮೊದಲಿಗೆ ೩.೨ ಅಡಿಯಿಂದ ೩.೬ ಅಡಿ ಉದ್ದದವರೆಗೆ ಮರದ ಹಲಿಗೆಗಳನ್ನು ನಿರ್ಮಿಸಿ ದೋಣಿಗಳನ್ನು ತಯಾರಿಸುತ್ತಿದ್ದರು.

**ಪರ್ಸಿಯನ್ ದೋಣಿಗಳ ಬಳಕೆ**

ಅರಂಭದಲ್ಲಿ ಟ್ರಾಲ್ ದೋಣಿಗಳಲ್ಲಿ ಮೀನುಗಳ ಪ್ರಮಾಣ ತಗ್ಗಿದ ಕಾರಣಕ್ಕಾಗಿ ರಂಪಣಿ ಬಲೆಗಳನ್ನು ಉಪಯೋಗಿಸಿಕೊಂಡು ತಮ್ಮ ಜೀವನೋಪಾಯವನ್ನು ಸಾಗಿಸುತ್ತಿದ್ದರು. ಮೀನುಗಾರರ ಸಮಸ್ಯೆ ಅರಿತ ಇಲಾಖೆಯು ಪರ್ಸಿಯನ್ ಬಲೆಗಳ ಪ್ರಾತ್ಯಕ್ಷತೆ ನೀಡಿತು. ೧೯೭೬-೭೭ರಲ್ಲಿ ಇದರಿಂದ ಬಂಗುಡೆ, ಭೂತಾಯಿ, ಸಾಡಿ, ಕೊಕ್ಕರೆ ಮುಂತಾದ ತೆಪ್ಪದ ಮೀನುಗಳನ್ನು ಹಿಡಿಯುವುದು ಸುಲಭವೆಂದು ತೋರಿಸಿ ಯಶಸ್ವಿಯಾಯಿತು. ಇಲಾಖೆಯು ರಾಷ್ಟ್ರೀಕೃತ ಬ್ಯಾಂಕುಗಳಿಂದ ಮೀನುಗಾರರಿಗೆ ಸಾಲ ಸೌಲಭ್ಯ ನೀಡಿತು. ೪೨ ರಿಂದ ೫೦ ಅಡಿ ಆಳದ ಸಮುದ್ರ ಮೀನುಗಾರಿಕೆಯನ್ನು ಆ ದೋಣಿಗಳು ಮಾಡುತ್ತಿದ್ದವು.

ಗೆಲುವುಗಳಿಗೆ ಹೋಲಿಸುತ್ತಾರೆ. ಸಮುದ ತೆರೆಗಿಂತಲೂ ಆಕರ್ಷಕವಾದುದು ನೊರೆ. ಕೆಲವರು ಹಾಲೆಂದು ಭಾವಿಸಿ ಅದನ್ನು ಬಾಚಲು ಹೋದಂತೆ ಅನೇಕರಿಗೆ ಕಡಲ ನೀರಿನ ಮಹತ್ವ ಗೊತ್ತಿಲ್ಲ ಎಂದು ಅವರು ಈ ರೀತಿಯಾಗಿ ಮರುಕ ಪಡುತ್ತಾರೆ. ಬೇರಿಲ್ಲದ ಗಿಡದಲ್ಲಿ ಬಳಿಯ ಹೂಮಾಲೆಯೆಂದೂ ಗಂಗಮ್ಮ ಜಡೆಯಲ್ಲದೇನೆ ಇಳಿಬಿಟ್ಟು ಹೂಮಾಲೆಯನ್ನು ಜೆಲ್ಲಿಯಂತೆ ವರ್ಣಿಸಲಾಗಿದೆ. ಒಬ್ಬರಿಯ ದೇವರಿಗೆ ಇಬ್ಬರು ಹೆಂಡಿರಂತೆ ನಮ್ಮ ಜನಪದ ಗರತೀಯರು ಇದನ್ನು ತುಂಬಾ ಸುಂದರವಾಗಿ ಕಟ್ಟಿದ್ದಾರೆ. ಇನ್ನೊಂದು ಮೀನಿನ ಮದುವೆಯ ಹಾಡು ಒಂದು ಪುಟ್ಟ ರೂಪಕದಂತಿದೆ. ಇಲ್ಲಿ ಮೀನು ಪ್ರಾಯಪ್ರಬುದ್ಧವಾದ ಹೆಣ್ಣಿನ ಸಂಕೇತ. ನಮ್ಮ ಮಗಳನ್ನು ಯಾರಿಗೆ ಕೊಡುವುದು ಎಂಬುದೇ ತಂದೆ-ತಾಯಂದಿರ ಸಮಸ್ಯೆ. ಅವರ ಕಣ್ಮುಂದೆ ಅನೇಕ ಗಂಡುಗಳಿದ್ದರೆ ಅವರು ಗೃಹಸ್ಥರನ್ನೂ ಬುದ್ಧಿವಂತರನ್ನು ಕರಸಿ ಪಂಚಾಯ್ತಿ ಮಾಡುವ ಸನ್ನಿವೇಶಗಳಿವೆ. ತುಳುನಾಡಿನ ಸಮುದ್ರ ಜನಪದದಲ್ಲಿ ಭಾಗದಲ್ಲಿ ಸೋಮರಿ ಹೆಣ್ಣೊಬ್ಬಳನ್ನು ಲೇವಡಿ ಮಾಡಲಾಗಿದೆ. ಆಕೆ ಯಾವ ಕೆಲಸಕ್ಕೂ ಸಿಗುವವಳಲ್ಲಾ ಆದರೆ ಕಂತು ಬಲೆಯ ದೋಣಿ ಬರುವಾಗ ಮಾತ್ರ ಕಡಲ ಕಿನಾರೆಯಲ್ಲಿ ಹಾಜರಿರುತ್ತಾಳೆ. ಏಕೆಂದರೆ ಆಕೆಯ ಪ್ರಿಯತಮ ಬರುತ್ತಾನೆಂದು !ಸದಾ ದುಡಿಯುವ ಮೊಗವೀರ ಕುಟುಂಬದ ಒಂದು ಸತ್ಯ ಚಿತ್ರಣವನ್ನು ತುಳು ಜೋಗುಳ ಬಿಂಬಿಸುತ್ತದೆ. ತಂದೆ ಮೀನು ತರಲು ಹೋಗುತ್ತಾನೆ. ತಾಯಿ ಮೀನು ಹೊರಲು ಹೋಗುತ್ತಾಳೆ. ಮಗುವನ್ನು ನೋಡಿಕೊಳ್ಳಲು ನೆರೆಮನೆಯಾಕೆಗೆ ತೊಟ್ಟಿಲು ತೂಗಲು ಹೇಳುತ್ತಾಳೆ. ಹೆಣ್ಣು ಗಂಡನ ಮನೆಗೆ ಹೋದಾಗ 'ದೇವರಲ್ಲಿ ಭಕ್ತಿಯನ್ನಿಡು' ನೆರೆಮನೆಯ ಹೆಂಗಸರನ್ನು ಅಕ್ಕ ಅಮ್ಮ ಎಂದೂ ಸಂಬೋಧಿಸುತ್ತಾ ಸ್ನೇಹದಿಂದಲೂ ಇರಬೇಕೆಂದು ಉಪದೇಶಿಸುತ್ತಾರೆ. ಹಾಡು ಹಾಡಬೇಕಾದರೆ ಒಳ್ಳೆಯ ಜೋಡಿ ಬೇಕು. ಹಾಡುಗಾರ್ತಿಯರ ಕೂಟ ಬೇಕು. ಅವರಿಗೆ ಒಳ್ಳೆಯ ಸ್ವರವೂ ಬೇಕು ಜನಪದ ಗಾಯಕಿಯರು ಹೇಳುತ್ತಾರೆ. ಮೊಗವೀರ ಮದುವೆ ಹಾಡುಗಳು ಚಪ್ಪರ ಹಾಕುವಲ್ಲಿಂದಲೇ ಆರಂಭವಾಗುತ್ತವೆ. ದಿಬ್ಬಣ ಒಳಗೆ ಬರುವಾಗ ಮದುಮಗನಿಗೆ ಮುಡಾಸು(ಚೆಂದಿ) ಕಟ್ಟುವಾಗ, ಧಾರೆಯೆರೆಯುವಾಗ, ಆರತಿ ಮಾಡುವಾಗ, ಕೊನೆಯಲ್ಲಿ ಚೆತ್ತಿಗಾರರನ್ನು ಹೊಗಳಲಿಕ್ಕೂ ಹಾಡು ಇದೆ.

**ಕಲೆಗಳು:** ಕರಾವಳಿಯಲ್ಲಿ ಅತ್ಯಂತ ಪುರಾತನ ಹಾಗೂ ಪ್ರಬುದ್ಧ ಕಲೆಗಳು ಕಂಡುಬರುತ್ತವೆ. ನಮ್ಮ ಕಡೇಕಾರಿನಲ್ಲಯೂ ಯಕ್ಷಗಾನ ಕಲೆ ಇಂದಿಗೂ ಜೀವಂತವಾಗಿದೆ. ಕರಾವಳಿಯಲ್ಲಿ ಜನಪ್ರಿಯತೆಗೊಂಡಿರುವ ಎರಡು ಮೇಳಗಳು ತೆಂಕುತಿಟ್ಟು, ಬಡಗು ತಿಟ್ಟುಗಳು, ಯಕ್ಷಗಾನ ಕಲೆಯು ಕರಾವಳಿ ಜನರ ಕಲಾತ್ಮಕ ಜೀವನದ ಉಸಿರು. ಈ ರೀತಿ ನಮ್ಮವರು ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಮೊಗವೀರರು ಭಾಗವತರಾಗಿ, ಹಿಮ್ಮೇಳ ಕಲಾವಿದರಾಗಿ ಪಾತ್ರಧಾರಿಗಳಾಗಿ ಮಂಡಳಿ ಮುಖ್ಯಸ್ಥರಾಗಿದ್ದಾರೆ. ಇತ್ತೀಚಿನ ದಿನಗಳ್ಲಿ ಹೆಣ್ಣು ಮಕ್ಕಳು ಉತ್ತಮ ಪಾತ್ರಧಾರಿಗಳಾಗಿ, ಉತ್ತಮ ಹಿಮ್ಮೇಳ ಕಲಾವಿದರಾಗಿ, ಭಾಗವತೆಯರಾಗಿ ಸೇವೆ ಸಲ್ಲಿಸುತ್ತಿರುವುದುನ್ನು ನಾವು ನೋಡಬಹುದಾಗಿದೆ. ಅನೇಕ ಮಹಿಳಾ ಯಕ್ಷಗಾನ ಮಂಡಳಿಗಳು ಅನೇಕ ಮಹಿಳಾ ಕಲಾ ಸಂಘಗಳು ಕರಾವಳಿಯಲ್ಲಿ

ಹುಟ್ಟಿಕೊಂಡಿವೆ. ಮದುವೆ ಸಮಯದಲ್ಲಿ ಮದರಂಗಿ ಹಚ್ಚುವಾಗ ಚಪ್ಪರ ಎಂಬ ಕಾರ್ಯಕ್ರಮವು ನಡೆಯುತ್ತದೆ. ತುಳುನಾಡಿನಲ್ಲಿ ಅದನ್ನು ಧೈಂಪಾ ಎನ್ನುವರು. ಇಲ್ಲಿ ಹೆಣ್ಣು ಮಕ್ಕಳ ವೈವಿಧ್ಯಮಯ ಹಾಡುಗಾರಿಕೆ, ನರ್ತನವಿರುತ್ತದೆ. ಮೊಗವೀರರ ಶಿಲ್ಪಕಲಾ ವೈವಿಧ್ಯವನ್ನು ಕಾಣಬೇಕಾದರೆ ಇವರ ದೇವಸ್ಥಾನಗಳಿಗೆ ಹೋಗಬೇಕು. ಇಲ್ಲಿ ದಾರು ಶಿಲ್ಪದ ಸುಂದರ ಕಲಾತ್ಮಕತೆಗಳಿವೆ. ಬಲೆಗಳನ್ನು ನೇಯುವುದು ಅದ್ಭುತ ಕಲೆ. ವಿವಿಧ ಗಾತ್ರದ ಮೀನುಗಳನ್ನು ಹಿಡಿಯುವ ಸಲುವಾಗಿ ನಾನಾ ರೀತಿಯ ಬಲೆಗಳನ್ನು ಕುಸುರಿ ಕೆಲಸದಿಂದ ಮಾಡಿರುವುದು ಅವರ ಜಾಣ್ಮೆಗೆ ಸಾಕ್ಷಿಯಾಗಿದೆ. ಮೀನಿನ ಬುಟ್ಟಿಗಳು, ಮರದ ದೋಣಿ, ಮರದ ತೊಟ್ಟು, ಮುಳುಗು ಭಾರಗಳು ಮುಂತಾದವುಗಳನ್ನು ಸುಂದರವಾಗಿ ಮೊಗವೀರರೇ ತಯಾರಿಸುತ್ತಾರೆ.

**ವೈದ್ಯಕೀಯ:**

ಮೋಗವೀರ ಮಹಿಳೆಯರು ಜನಪದ ವೈದ್ಯರೂ ಹೌದು. ಅವರು ಮುಖ್ಯವಾಗಿ ಈ ಕೆಳಗಿನ ಕಾಯಿಲೆಗಳಿಗೆ ಔಷಧಿ ತಯಾರು ಮಾಡುತ್ತಾರೆ.

೧. **ಬಾಣಂತಿಯರಿಗೆ ಔಷಧ:** ಒಣಶುಂಠಿ ಹುಡಿ ಮಾಡಿ ಬೆಲ್ಲವನ್ನು ಸೇರಿಸಿ ತಯಾರಿಸಿದ ಕಷಾಯವನ್ನು ಹೆತ್ತ ಮರುದಿನದಿಂದಲೆ ಕೊಡಲು ಆರಂಭಿಸುತ್ತಾರೆ. ಬೆಳಗ್ಗೆ ಸ್ನಾನ ಮಾಡಿ ಬಂದೊಡನೆ ಮತ್ತು ಸಂಜೆ ಸೇವಿಸುತ್ತಾರೆ.

೨. **ನೀರುಳ್ಳಿ ಹಲ್ವ:** ತೆಂಗಿನಕಾಯಿ ಹಾಲಿಗೆ ನೀರುಳ್ಳಿಯನ್ನು ಸಣ್ಣಗೆ ಕೊಚ್ಚಿ ಹಾಕಿ, ಸಾಕಷ್ಟು ಪಾಲೆ ಬೆಲ್ಲ ಸೇರಿಸಿ ಚೆನ್ನಾಗಿ ಬೇಯಿಸಿ ತಯಾರು ಮಾಡಿದ ಹಲ್ವ, ಬಾಣಂತಿ ಯರಿಗೆ ಇದು ಲೋಹದಂತೆ ಪರಿಣಾಮಕಾರಿಯಾದ ಔಷಧಿಯಾಗಿದೆ.

೩. **ಬಾಣಂತಿಯರ ಊಟ:** ತೆಂಗಿನಕಾಯಿ ತುರಿ ಮತ್ತು ಜೀರಿಗೆ ಇವನ್ನು ಚೆನ್ನಾಗಿ ರುಬ್ಬಿ, ರುಚಿಗೆ ತಕ್ಕ ಬೆಲ್ಲ ಅಥವಾ ಉಪ್ಪು ಸೇರಿಸಿ ಅನ್ನದೊಡನೆ ಕಲಸಿ ಊಟ ಮಾಡಿಸುತ್ತಾರೆ. ಮರುದಿನ ತೆಂಗಿನ ಕಾಯಿ ತುರಿಗೆ ಸ್ವಲ್ಪ ಕಾಳು ಮೆಣಸು ಸೇರಿಸಿ ರುಬ್ಬಿ ಗಂಜಿಯೊಟ್ಟಿಗೆ ಬೇಯಿಸಿ ಆ ಗಂಜಿಯಲ್ಲಿ ಊಟ ಮಾಡಿಸುತ್ತಾರೆ.

೪. **ಚಾಟೆ:** ಚಾಟೆಯ ಕೊನೆ ತಿಂದರೆ ಕಣ್ಣಿನ ದೃಷ್ಟಿಗೆ ತುಂಬ ಒಳ್ಳೆಯದಂತೆ

೫. **ಬಾಣಂತಿಯರಿಗೆ ಕಂಡಿಕೆ:** ಬಾಣಂತಿಯರಿಗೆ ಮೀನು ಮತ್ತು ಒಳಮೀನು ಹಿತಕರ. ಇದಕ್ಕೆ ಸ್ವಲ್ಪ ಕಾಳು ಮೆಣಸು ಹಾಕಿ ಮೀನಿನ ಪಳ್ದ ಮಾಡಿ ಊಟ ಮಾಡಿದರೆ ಆರೋಗ್ಯಕರ.

೬. **ಕಡಲ ಹಂದಿ:** ಈ ಮೀನು ಪದಾರ್ಥವನ್ನು ಕಾಲು ಒಡೆಯುವ ಭಾಗಕ್ಕೆ ಹಚ್ಚಿದರೆ ಬೇಗ ಗುಣವಾಗುತ್ತದೆ.

೭. **ಬಂಗುಡೆ ಎಟ್ಟೆ:** ಬಾಣಂತಿಯರಿಗೆ ಪಥ್ಯ(ಹಿತಕರವಾಗಿರುತ್ತದೆ).

**ಸಮಾಜಕ್ಕೆ ಮೀನುಗಾರ ಮಹಿಳೆಯರ ಕೊಡುಗೆ**

ಮೀನು, ರಿಬ್ಬನ್ ಮೀನು, ಪಿಂಕ್‌ಪಚರ್, ಸ್ಕ್ವಿಡ್ಸ್‌ಗಳನ್ನು ಹಿಡಿಯಬಹುದು. ಡ್ಯಾನಿಡ್ ಪ್ರಾಜೆಕ್ಟ್‌ನ ತಾಂತ್ರಿಕ ಸಿಬ್ಬಂದಿಗಳು ಈ ಎಲೆಕ್ಟ್ರಾನ್‌ಗಳನ್ನು ಅಳವಡಿಸುವುದನ್ನು ಕಲಿತರು. ಇವರಲ್ಲಿ ಜಿ.ಪಿ.ಎಸ್., ನ್ಯಾವಿಗೇಟರ್ಸ್, ಫಿಶಫೈಂಡರ್ಸ್, ರೇಡಿಯೋ, ಟೆಲಿಫೋನ್ ಅಳವಡಿಕೆ ಆಗಿದೆ. ಇದಕ್ಕೆ ಇಲಾಖೆ ಪ್ರತಿ ಬೋಟಿಗೆ ರೂ೨೪,೦೦೦ಗಳ ಸಹಾಯಧನ ನೀಡಿದೆ. ಈಗ ಇಂಥ ೪೦೦ ರಿಂದ ೫೦೦ ದೋಣಿಗಳನ್ನು ನೋಡಬಹುದು.

**ಬಂದರುಗಳು ಮತ್ತು ತಂಗುದಾಣಗಳು**

ತಾಂತ್ರಿಕ ದೋಣಿಗಳು ಇರಿಸಲು ಒಂದು ನಿರ್ದಿಷ್ಟ ತಂಗುದಾಣದ ವ್ಯವಸ್ಥೆಯನ್ನು ಕಲ್ಪಿಸಲಾಯಿತು. ಅದನ್ನು ಮಾಜಾಳಿ, ಸದಾಶಿವಘಢ, ಕಾರವಾರ, ಬೇಲಿಕೇರಿ, ಕೋಣಿ, ತದಡಿ, ಕಾಗಲಹಿಣಿ, ಹೊನ್ನಾವರ, ತೆಂಗಿನಗುಂಡಿ, ಭಟ್ಕಳ್, ಗೂರ್ಟೆ, ಹೊನ್ನಳಿ, ಮರ್ಡೇಶ್ವರ, ಅಳ್ವೇಕೋಟ, ಗಂಗೊಳಿ, ಮಲ್ಪೆ, ಮುಲ್ಕಿ ಮತ್ತು ಮಂಗಳೂರುಗಳಲ್ಲಿ ನಿರ್ಮಿಸಲಾಯಿತು.

೧೯೬೦ರ ದಶಕದಲ್ಲಿ ರಷ್ಯಾದ ನೇವಲ್ ಆರ್ಕಿಟೆಕ್ಟ್ ಶ್ರೀ ಬ್ಲ್ಯೂಕ್ ಎಂಬ ಪರಿಣಿತರು ಸಮೀಕ್ಷೆ ನಡೆಸಿದ ಪರಿಣಾಮ ಮಲ್ಪೆ ಮತ್ತು ಹೊನ್ನಾವರ ಮೀನುಗಾರಿಕೆ ಬಂದರುಗಳ ನಿರ್ಮಾಣವಾಯಿತು.

**ಮಂಗಳೂರು ಬಂದರು**

೧೯೭೩ರಲ್ಲಿ ೧೪೭.೦೦ಲಕ್ಷ ವೆಚ್ಚದಲ್ಲಿ ೫.೫ ಎಕರೆ ವಿಸ್ತೀರ್ಣದಲ್ಲಿ 'ದನ್ನು ನಿರ್ಮಿಸಲಾಯಿತು. ಇಲ್ಲಿ ೨೨೩ ಮೀಟರ್, ೬೭೫ ಚ.ಮೀ. ಹಾರಾಜು ಪ್ರಾಂಗಣ ವಿಶಾಲವಾದ ರಸ್ತೆ ನೀರಿನ ವ್ಯವಸ್ಥೆ, ವಿದ್ಯುತ್ ಸರಬರಾಜು, ಸುಸಜ್ಜಿತವಾದ ಚರಂಡಿ ವ್ಯವಸ್ಥೆ ಇದೆ. ೩೫೦ ದೋಣಿಗಳು, ತಂದ ಮೀನನ್ನು ಇಳಿಸಲು ಇಲ್ಲಿ ಅವಕಾಶವಿದೆ. ಇಲ್ಲಿ ಸುಮಾರು ೯೦೦ಕ್ಕೂ ಹೆಚ್ಚು ಯಾಂತ್ರಿಕ ದೋಣಿಗಳು ಕಾರ್ಯನಿರ್ವಹಿಸುತ್ತಿದ್ದು, ಇದರಿಂದ ಒತ್ತಡ ಉಂಟಾಗಿದೆ. ಇದನ್ನು ತಗ್ಗಿಸಲು ೨೨೩ ಮೀಟರ್ ಉದ್ದದ ಧಕ್ಕೆಯನ್ನು ೬೦ ಮೀಟರ್ ಉದ್ದದ ಧಕ್ಕೆಗೆ ವಿಸ್ತರಿಸಲಾಯಿತು ಇದರಲ್ಲಿ ೨೦.೦೦೦ ಮೀನುಗಾರರು ಉಪಯೋಗ ಪಡೆದುಕೊಂಡಿದ್ದಾರೆ.

**ಮಲ್ಪೆ ಬಂದರು**

ಈ ಬಂದರು ೫.೪೦ ಕೋಟಿ ವೆಚ್ಚದಲ್ಲಿ ಮೊದಲನೇ ಹಂತದ ಮೀನುಗಾರಿಕೆ ಉದ್ಯಾವರ ನದಿಯ ದಡದಲ್ಲಿ ೧೯೮೬ರಲ್ಲಿ ೧೧೦ ಮೀ ಉದ್ದದ ಧಕ್ಕೆಯನ್ನು ೧೬೦ ಮೀಟರ್ ಉದ್ದದ ಎರಡು ಜಟ್ಟಿಗಳನ್ನು ೧೫೦೦೦ ಚ.ಮೀಟರ್ ವಿಸ್ತೀರ್ಣ ಹರಾಜು ಪ್ರಾಂಗಣವನ್ನು ಹೊಂದಿದ್ದು, ರಸ್ತೆ, ನೀರು, ಚರಂಡಿ, ವಿದ್ಯುತ್ ಸರಬರಾಜು ಮುಂತಾದ ಸೌಲಭ್ಯಗಳಿವೆ. ೨೨ ಹಳ್ಳಿಗಳು, ೨೦.೦೦೦ ಮೀನುಗಾರರಿದ್ದಾರೆ. ೩೦೦ ಯಾಂತ್ರಿಕ ದೋಣಿಗಳ ನಿಲ್ದಾಣಕ್ಕೆ ಅನುಕೂಲ ಕಲ್ಪಿಸಿದೆ. ೧೨೦೦ ಯಾಂತ್ರಿಕೃತ ದೋಣಿಗಳಿವೆ. ೨ನೇ ಹಂತದ ನಿರ್ಮಾಣವನ್ನು ೧೬೦ ಲಕ್ಷ ವೆಚ್ಚದಲ್ಲಿ ಇದರ ಪೂರ್ವ ಧಕ್ಕೆಯನ್ನು ೨೨೦ ಮೀಟರ್‌ವರೆಗೆ ಪಶ್ಚಿಮದ ಧಕ್ಕೆಯನ್ನು ೩೨೦ ಮೀಟರ್‌ರವರೆಗೆ ವಿಸ್ತರಿಸುವುದು(ಒಟ್ಟು ೫೪೦ ಮೀಟರ್ ಧಕ್ಕೆ). ಮೀನು ಖಾಲಿ ಮಾಡಿದ ನಂತರ ತಂಗಲು ೧೪೦ ಮೀಟರ್ ತಂಗುದಾಣ ಹಾಗೂ ೧೪೦ ಮೀಟರ್ ೨ ಧಕ್ಕೆಗಳು, ೧.೫೦೦ ಚ.ಮೀ. ಹರಾಜು ಪ್ರಾಂಗಣ, ರಸ್ತೆ, ನೀರು, ಚರಂಡಿ, ವಿದ್ಯುತ್ ಸರಬರಾಜು ಸೇರಿವೆ. ಧಕ್ಕೆಗಳ ನಿರ್ಮಾಣದಿಂದ ೪೦.೦೦೦ ಚ.ಮೀ. ರೇವು ನಿರ್ಮಿಸಲಾಗಿದೆ. ವಿ.ಎಚ್.ಎಫ್.ಟವರ್‌ನ್ನು ನಿರ್ಮಿಸಿ, ರೇಡಿಯೋ, ಟೆಲಿಫೋನ್ ಸೌಕರ್ಯವನ್ನು ಕೇಂದ್ರ ಸರ್ಕಾರದ ಸಹಾಯದಿಂದ ನಿರ್ಮಿಸಿದೆ. ೩೦.ಕಿ.ಮೀ. ದೂರದ ದಡದಲ್ಲಿ ೫೦ ಮೀ. ದೂರದ ದೋಣಿಗಳನ್ನು

ವಾಕಿಟಾಕಿಯ ಮೂಲಕ ಸಂಪರ್ಕಿಸಬಹುದು. ರಿಮೋಟ್ ಸೆನ್ಸಿಂಗ್ ಏಜೆನ್ಸಿ, ಹೈದ್ರಾಬಾದ್ ಇವರಿಂದ ಸಮುದ್ರದಲ್ಲಿ ಮೀನುಗಳ ಸ್ಥಿತಿಗತಿ ವಿವರಗಳನ್ನು ಪಡೆದು ಮೀನುಗಾರರಿಗೆ ಬಿತ್ತರಿಸುತ್ತಾರೆ.

**ಗಂಗೊಳ್ಳಿ ಬಂದರು**

ಸುಮಾರು ೮೩೨ ಲಕ್ಷ ರೂಪಾಯಿ ವೆಚ್ಚದಲ್ಲಿ ೨೦೦೧ರಲ್ಲಿ ಡೆಯಾಡ್ರಮ್ ವಾಲ್ ನಿರ್ಮಿಸಲಾಗಿದೆ. ೮೦೦ ಯಾಂತ್ರಿಕ ದೋಣಿಗಳಿವೆ.

**ಹೊನ್ನಾವರ ಬಂದರು**

೧೯೮೦ರಲ್ಲಿ ೧೨೦.೯೯ ಲಕ್ಷಗಳ ವೆಚ್ಚದಲ್ಲಿ ೧೦ ಎಕರೆ ಪ್ರದೇಶದಲ್ಲಿ ಶರಾವತಿ ನದಿಯ ತಟದಲ್ಲಿ ನಿರ್ಮಿಸಲಾಯಿತು. ಇದು ೨೦೦ ಮೀಟರ್ ಉಳಿದ ಧಕ್ಕೆ ೧೦೦೦ ಚ.ಮೀ. ಹರಾಜು ಪ್ರಾಂಗಣ, ರಸ್ತೆಗಳು, ನೀರು ಸರಬರಾಜು, ಮೀನು ಶೇಖರಣ ಗೋಡನ್, ವಿದ್ಯುಚ್ಛಕ್ತಿ ಮುಂತಾದವುಗಳನ್ನು ಒದಗಿಸಿವೆ. ಕೇಂದ್ರ ಸರ್ಕಾರ ಆಯುಕ್ತರ ಅಧ್ಯಕ್ಷತೆಯಲ್ಲಿ ತಂಡವನ್ನು ರಚಿಸಿದ್ದು, ದಿನಾಂಕ ೮-೯-೨೦೦೩ರಲ್ಲಿ ಪರಿಶೀಲನ ಭೇಟಿ ನೀಡಿರುತ್ತಾರೆ. ಇಲ್ಲಿ ೨೦೦ ಯಾಂತ್ರಿಕ ದೋಣಿಗಳಿವೆ.

**ತದಡಿ ಬಂದರು**

ಅಘನಾಶಿನಿ ನದಿ ದಡದಲ್ಲಿ ಇಂಡೋ ಡ್ಯಾನಿಸ್ ಯೋಜನೆಯಡಿ ೧೪೩.೭ ಲಕ್ಷಗಳಲ್ಲಿ ೧೯೮೩-೮೪ರಿಂದ ೧೯೯೨-೯೩ ಮತ್ತು ೧೯೯೫-೯೬ರಲ್ಲಿ ಇದು ಪೂರ್ಣಗೊಂಡಿತು. ೨೫೦ ಮೀ. ಉದ್ದದ ಧಕ್ಕೆಯಿದ್ದು, ಸ್ಲೋಪಿಂಗ್ ಹಾರ್ಡ್ ಮತ್ತು ಗ್ರೈಯಾನ್‌ವಿದೆ. ೧೪೦೦ ಚ.ಮೀ. ಹರಾಜು ಪ್ರಾಂಗಣ, ೨೦ ಟನ್ ಸಾಮರ್ಥ್ಯದ ಶಿಥೀಲಿಗೃಹ, ಮ್ಯಾಕನಿಕಲ್ ಕಾರ್ಯಾಗಾರ, ಬಲೆಗಳ ರಿಪೇರಿ ಮತ್ತು ಶೇಖರಣಾ ಶೆಡ್, ಸಾಮಾಜಿಕ ಭವನ, ಮೀನು ಹ್ಯಾಂಡಿಂಗ್ ಶೆಡ್‌ಗಳನ್ನು ನೀಡಲಾಯಿತು. ಇಲ್ಲಿ ೩೨೫ ಯಾಂತ್ರಿಕ ದೋಣಿಗಳಿವೆ.

**ಕಾರವಾರ ಬಂದರು**

ಇಂಡೋ ಡ್ಯಾನಿಸ್ ಯೋಜನೆಯಡಿ ೧೯೬೨-೬೩. ೧೯೭೨ರಲ್ಲಿ ಸುಮಾರು ೧೬೫ ಮೀಟರ್ ಉದ್ದ ಧಕ್ಕೆಗೆ ೫೮೦ ಚ.ಮೀ.ವಿಸ್ತೀರ್ಣದ ಹರಾಜು ಪ್ರಾಂಗಣ, ಆಳ ೫ ಮೀ. ಉದ್ದ ೧೪ ಮೀ.ದೋಣಿಗಳು ಇಲ್ಲಿ ಬರಬಹುದು. ಇದರಲ್ಲಿ ದೋಣಿ ನಿರ್ಮಾಣ ಘಟಕ, ಬರ್ಫ್ ಕಾರ್ಖಾನೆ, ಶೀಥಲಿಗೃಹ, ಮೀನು ಘನೀಕರಿಸುವ ಸೌಕರ್ಯ, ಇಂಜನ್ ರಿಪೇರಿ ಕಾರ್ಯಾಗಾರ, ಇಂಜನ್ ಬಿಡಿಭಾಗಗಳ ಮಾರಾಟ ಕೇಂದ್ರಗಳನ್ನು ಸುಸಜ್ಜಿತವಾಗಿ ಕಲ್ಪಿಸಿಕೊಡಲಾಗಿದೆ. ಕೇಂದ್ರ ಸರ್ಕಾರದ ಯೋಜನೆಯಡಿಯಲ್ಲಿ ಮೀನು ಹುಡಿ ಕಾರ್ಖಾನೆಗೆ ಅಭಿವೃದ್ಧಿ ನಿಗಮದಿಂದ ೧೩೪ ಲಕ್ಷ ವೆಚ್ಚದಲ್ಲಿ ೧೯೮೨ರಲ್ಲಿ ಸ್ಥಾಪನೆಯಾಯಿತು. ೨ನೇ ಹಂತದ ನಿರ್ಮಾಣಕ್ಕೆ ೧೯೯೮ರಲ್ಲಿ ಕೈ ಹಾಕಿತು. ೧೦೦ ಧಕ್ಕೆಯನ್ನು ಹಾಲಿ ಇದ್ದ ಧಕ್ಕೆಗೆ ಹೊಂದಿಸಿಕೊಡಲಾಗಿದೆ. ಇದರಲ್ಲಿ ಮೀನು ಹರಾಜು ಪ್ರಾಂಗಣ, ಹೂಳು ತೆಗೆಯುವುದು. ಧಕ್ಕೆ ಸುಮಾರು ೨೨೦ಲಕ್ಷಗಳು ಮಂಜೂರಾಗಿದೆ.

**ಆಮದಳ್ಳಿ ಬಂದರು**

ಮೀನುಗಾರರ ಅನುಕೂಲಕ್ಕಾಗಿ ನೇವೆಲ್ ಬೇಸ್ 'ಸೀಬಿಡ್' ಯೋಜನೆಯಲ್ಲಿ ೧೦.೩೨ ಕೋಟಿ ವೆಚ್ಚದಲ್ಲಿ ಸೆಂಟ್ರಲ್ ವಾಟರ್ ಆಂಡ್ ಪವರ್ ರಿಸರ್ಚ್ ಸೆಂಟರ್ ಇವರ ಯೋಜನೆ ಆಡಳಿತ ಕಾಮಗಾರಿಗೆ ವಹಿಸಲಾಗಿದೆ. ರಾಜ್ಯ ಸರ್ಕಾರಕ್ಕೆ ೧೦,೩೨ಕೋಟಿಗಳನ್ನು ನೀಡಿದೆ.

**ಇತರ ಬಂದರುಗಳು**

**ಆಳ್ವೇಕೋಡಿ/ತೆಂಗಿನ ಗುಡಿ**

ವೆಂಕಟಾಪುರ ನದಿಯ ತೀರದಲ್ಲಿ ಇಲಾಖೆಯು ಸರಕು ಕಟ್ಟೆಯನ್ನು ಮೀನುಗಾರರ ದೋಣಿಗಳಲ್ಲಿ ಹಿಡಿದು ತಂದ ಮೀನುಗಳನ್ನು ಇಳಿಸಲು ಬಳಸುತ್ತಾರೆ. ಇದು ೬೦ ಮೀಟರ್ ಉದ್ದ ಜೆಟ್ಟಿ, ಹರಾಜು ಪ್ರಾಂಗಣ, ರಸ್ತೆ ನಿರ್ಮಾಣವಾಗಿದೆ. ಇದಕ್ಕೆ ರೂ.೮೯.೫೩ಲಕ್ಷಗಳು ೧೯೯೫ರಲ್ಲಿ ಮಂಜೂರಾಗಿದೆ ಹಾಗೂ ರಾಜ್ಯ ಸರ್ಕಾರ ಹತ್ತು ಲಕ್ಷ ರೂಪಾಯಿಗಳನ್ನು ಬಿಡುಗಡೆ ಮಾಡಿದೆ. ಇನ್ನು ೨೨೫ಲಕ್ಷ ರೂಪಾಯಿಗಳು ಬೇಕಾಗಿದೆ.

**ಕೋಡಿಬೆಂಗ್ರೆ ಬಂದರು**

ಉಡುಪಿ ಜಿಲ್ಲೆಯ ಸೀತಾ ನದಿಯ ದಡದಲ್ಲಿ ೧೯೯೩ರಲ್ಲಿ ರೂ.೫೫.೫೦ ಲಕ್ಷ ವೆಚ್ಚದಲ್ಲಿ ಒಂದು ಧಕ್ಕೆ ನಿರ್ಮಾಣವಾಯಿತು. ಇದರಲ್ಲಿ ಹರಾಜು ಪ್ರಾಂಗಣ, ಕಾಲುವೆ ಹೂಳುಗಳು ತುಂಬಿರುವುದರಿಂದ ಮೀನು ಇಳಿಸಲು ಸಾಧ್ಯವಿಲ್ಲ.

**ಹೆಜಮಾಡಿಕೋಡಿ ಬಂದರು**

೧೯೯೫ರಲ್ಲಿ ರೂ.೯೫ಲಕ್ಷದಲ್ಲಿ ಮುಲ್ಕಿ ನದಿಯ ತಟದಲ್ಲಿ ಕೇಂದ್ರ ಸರ್ಕಾರದ ಅನುದಾನದಲ್ಲಿ ನಿರ್ಮಿತವಾಯಿತು. ಒಂದು ಧಕ್ಕೆ, ಹರಾಜು ಪ್ರಾಂಗಣ, ಹೂಳು ತೆಗೆಸಲಾಯಿತು.

**ಬೇಲಿಕೇರಿ ಬಂದರು**

ಅಂಕೋಲ ತಾಲೂಕಿನ ಬೇಲೀಕೆರಿಯಲ್ಲಿ ೧೯೯೦ರಲ್ಲಿ ರೂ.೬೭.೪೦ ಲಕ್ಷ ಅಂದಾಜು ವೆಚ್ಚದಲ್ಲಿ ಆರ್.ಸಿ.ಸಿ. ಜೆಟ್ಟಿ ನಿರ್ಮಾಣವಾಗಿದೆ. ಬಂದರಿನ ರೂಪುರೇಷೆಗಳಿಗೆ ೧೪೧ ಲಕ್ಷ ಖರ್ಚಿಸಿದೆ. ಇದರಲ್ಲಿ ಜೆಟ್ಟಿ ನಿರ್ಮಾಣಕ್ಕೆ ಅನುದಾನ ಸಿಕ್ಕಿದೆ. ಅವುಗಳಿಂದ ಉಳ್ಳಾಲ ರೂ.೩೪ ಲಕ್ಷಗಳು, ಹಂಗಾರಕಟ್ಟೆ ರೂ.೪೦ ಲಕ್ಷ, ಬೆಳಂಬರ್ ರೂ.೯೬ ಲಕ್ಷಗಳು, ಗಂಗಾವಳಿ ರೂ.೯೭ ಲಕ್ಷ ಸಮಾನವಾಗಿ ನೀಡಿದೆ. ಮತ್ತು ೨೫ ಸಣ್ಣ ಮೀನುಗಾರಿಕ ತಂಗುದಾಣಗಳ ಅಭಿವೃದ್ಧಿಪಡಿಸಲಾಗಿದೆ. ಇಲ್ಲಿ ಯಾಂತ್ರಿಕ ದೋಣಿಗಳನ್ನು ಇರಿಸಲು ಅನುಮತಿ ಇದೆ.

**ಬಂದರುಗಳಲ್ಲಿ ಕರವಸೂಲಿ**

ಮಲ್ಪೆ, ಮಂಗಳೂರು, ಹೊನ್ನಾವರ, ತದಡಿ ಮತ್ತು ಕಾರವಾರ ಬಂದರುಗಳು ಕರವಸೂಲಿ ಕೇಂದ್ರಗಳಾಗಿವೆ.

ಮೀನು ಇಳಿಸಲು, ದೋಣಿ ತಂಗಲು ಪ್ರತಿ ವ್ಯಕ್ತಿಗಳು ನಿರ್ದಿಷ್ಟವಾದ ಹಣವನ್ನು ನೀಡಬೇಕಾಗಿದೆ. ಇದನ್ನು ಕರವಸೂಲಿ ಎಂದು ಕರೆಯುತ್ತಾರೆ. ೨೦೦೩-೦೪. ೨೦೦೪-೦೫ ಅನುಕ್ರಮದಂತೆ ೨೫.೩೯ ಲಕ್ಷ, ೮೭.೯೨ಲಕ್ಷ ಕರವಸೂಲಿಯಾಗಿದೆ.

**೫. ಕೊಂಡಿ ರಸ್ತೆಗಳು:** ೧೯೬೦ರಲ್ಲಿ ಇಲಾಖೆಯು ಮಾರಾಟ ಕೇಂದ್ರಗಳಿಗೆ ರಾಷ್ಟ್ರೀಯ ಹೆದ್ದಾರಿಗಳಿಂದ ಕರಾವಳಿ ಜಿಲ್ಲೆಗಳಿಗೆ ಕೊಂಡಿ ರಸ್ತೆಗಳನ್ನು ನಿರ್ಮಿಸಿ ಕೊಟ್ಟಿವೆ. ೧೯೦ ಕಿ.ಮೀ. ಉದ್ದದಲ್ಲಿ ೧೨೪ ಕೊಂಡಿ ರಸ್ತೆಗಳನ್ನು ಹೊಂದಿದೆ.

**ಕಡಲ ಮೀನು ಉತ್ಪಾದನೆ**

೧೯೫೬-೬೦ರಲ್ಲಿ ವಾರ್ಷಿಕ ಸರಾಸರಿ ೭೦,೦೦೦ ಟನ್ ಕಡಲ ಮೀನು ಉತ್ಪಾದಿಸಲಾಗಿದೆ.. ೧೯೬೬-೬೭ರಲ್ಲಿ ೧.೨೮.೩೩೨ ಟನ್‌ಗಳಷ್ಟು ಮೀನು ಟ್ರಾಲ್ ದೋಣಿಗಳಿಂದ ೧೯೯೬-೯೭ರ ವೇಳೆಗೆ ೨.೨೨.೭೯ಟನ್ ಮೀನನ್ನು ಪರ್ಸೀನ್ ದೋಣಿಗಳಿಂದ ಉತ್ಪಾದಿಸಿದೆ. ೫೦ ವರ್ಷಗಳ ಉತ್ಪಾದನೆ ನೋಡಿದರೆ ತುಂಬ ಏರಿಳಿತ ಉಂಟಾಗಿದೆ.

**೧೯೫೬-೧೯೭೨:** ೩೦೦ ಕಿ.ಮೀ. ಉದ್ದದವರೆಗೂ ಯಾಂತ್ರಿಕ ದೋಣಿಗಳು, ಟ್ರಾಲರುಗಳು, ೬೬೯ ಪರ್ಸೀನ್ ದೋಣಿಗಳು, ೪೦೦, ಗಿಲ್ ನೆಟ್ಟರ್ಸ್ ೧೧೪೦ಗಳಷ್ಟು. ನಾಡದೋಣಿಗಳು ೨೩೦೦೦ದಷ್ಟಾಗಿವೆ. ದಕ್ಷಿಣ ಕನ್ನಡ ಉಡುಪಿ ಕರಾವಳಿಯಲ್ಲಿ ಜೂನ್‌ರಿಂದ ಆಗಸ್ಟವರೆಗೆ ಉತ್ತರ ಕನ್ನಡದಲ್ಲಿ ಜೂನ್ ೧೦ರಿಂದ ಜುಲ್ ೨೯ರವರೆಗೆ ಮೀನುಗಾರರಿಗೆ ನಿರ್ಬಂಧವಿರುತ್ತಿತ್ತು.

**ಮೀನಿನ ರಫ್ತು**

ಘನೀಕರಣ ಸೌಲಭ್ಯಗಳು ಹೆಚ್ಚಿದಂತೆ ೧೯೫೬-೫೭ರಲ್ಲಿ ರಫ್ತಿನ ಪ್ರಮಾಣ ೧,೨೦೦ ಕೋಟಿಗಳಿಂದ ೨೦೦೪-೦೫ರ ವೇಳೆಗೆ ೨೬೨.೨೯ ಕೋಟಿ ಹೆಚ್ಚಾಗಿದೆ. ಘನೀಕರಿಸಿದ ಸಿಗಡಿ ಪ್ರಮಾಣ ೬೦ರಷ್ಟಾಗಿದೆ. ಘನೀಕರಿಸಿರುವ ಮೀನು ಡಬ್ಬೀಕರಿಸುವ ಮೀನು, ಘನೀಕರಿಸಿದ ಸಿಗಡಿ, ಫೀಶ್‌ಮೀಲ್ ಮುಂತಾದವು ಇತ್ತೀಚೆಗೆ ಪಾಂಜೋಲ್(ರಿಬ್ಬನ್ ಫೀಶ್) ಬೋಂಡಾಸ್ (ಕ್ವಾಡಸ್), ಕಟಲ್ ಫೀಶ್‌ಗಳು ಹೆಚ್ಚಾಗಿ ರಪ್ತಾಗುತ್ತವೆ. ೫೦ ರಿಜಿಸ್ಟರ್ಡ್ ರಫ್ತುದಾರರಿದ್ದಾರೆ. ನಮ್ಮಿಂದ ಜಪಾನ್, ಯುಎಸ್‌ಎ, ಆಸ್ಟ್ರೇಲಿಯಾ, ಫ್ರಾನ್ಸ್, ಜರ್ಮನಿ, ನೆದರ್‌ಲ್ಯಾಂಡ್, ಇಟಲಿ, ಸ್ಪೇನ್, ಯುನೈಟೆಡ್ ಕಿಂಗಡಮ್, ರಷ್ಯಾ, ಚೀನಾ, ಮಲೇಶಿಯ, ಸಿಂಗಾಪೂರ, ದುಬೈ, ಶ್ರೀಲಂಕಾಗಳಿಗೆ ರಫ್ತಾಗುತ್ತವೆ.

**ಉಪಪದಾರ್ಥಗಳ ಉತ್ಪತ್ತಿ**

ಭೂತಾಯಿ ಮೀನಿನ ಎಣ್ಣೆ ತೆಗೆಯುವುದರಿಂದ ನಾಡದೋಣಿಗಳ ಹಲಗೆಯನ್ನು ರಕ್ಷಿಸಲು ಉಪಯೋಗವಾಗುತ್ತದೆ. ಎಣ್ಣೆಯನ್ನು ತೆಗೆದ ಮೇಲೆ ಮೀನನ್ನು ಗೊಬ್ಬರವಾಗಿ ಉಪಯೋಗಿಸುತ್ತಾರೆ. ಸಮುದ್ರ ತೀರದಲ್ಲಿಮರಳಿನ ಮೇಲೆ ಒಣಗಿಸುತ್ತಾರೆ. ಇದನ್ನು ಕುಂದಾಪುರ, ಮಜಾಳಿ, ಕಾರಾವಾರ ಬೀಚ್‌ಗಳಲ್ಲಿ ಕಾಣಬಹುದಾಗಿದೆ. ಗೊಬ್ಬರಗಳನ್ನು ಕಾಫಿ, ಟೀ ಬೆಳೆಗಳನ್ನು ಬೆಳೆಸಲು ಉಪಯೋಗಿಸುತ್ತಾರೆ. ಶುಚಿ ಮಾಡಿದ ನಂತರ ನೆಲದ ಮೇಲೆ ಒಣಗಿಸಿದ(ಎಣ್ಣೆ ತೆಗೆದ) ಮೀನನ್ನು ಪುಡಿ ಮಾಡಿ ಜರಡಿ ಹಿಡಿದು ಮೀನು ಆಹಾರ, ದನ ಮತ್ತು ಕೋಳಿಗಳ ಆಹಾರವಾಗಿ ಬಳಸುತ್ತಾರೆ. ಶಾರ್ಕ್ ಮೀನಿನ ಬಾಲವನ್ನು ಒಣಗಿಸಿ ಪುಡಿ ಮಾಡಿ ಗೋಲ್ಡ್ ಮತ್ತು ಸಿಂಗಲ್ ಮೀನುಗಳ ಏರ್‌ಬ್ಲಾಡರ್‌ಗಳನ್ನು ತೆಗೆಯಲು ಸಮುದ್ರದ ನೀರಿನಲ್ಲಿ ತೊಳೆದು ಬಿಸಿಲಿನಲ್ಲಿ ಒಣಗಿಸಲಾಗುತ್ತದೆ. ಚೀನಾ ದೇಶಕ್ಕೆ ಮುಂಬೈ ಮತ್ತು ಮಂಗಳೂರು ಬಂದರಿನ ಮೂಲಕ ರಫ್ತು ಮಾಡುತ್ತಾರೆ. ಹೊಸದಾಗಿ ತಯಾರಿಸಿದ ೧೭ ಫ್ರೀಜ್ ಮೀನು ಘಟಕಗಳು ಮತ್ತು ೭ ಡಬ್ಬೀಕರಿಸಿದ ಘಟಕಗಳಿವೆ.

**ಮೀನುಗಾರರ ಸಂಖ್ಯೆ**

೧೯೭೨ರಲ್ಲಿ ಮೀನುಗಾರರು ೧.೭೫೦೦ಗಳಾಗಿದ್ದು, ೧೯೮೩ರ ಹೊತ್ತಿಗೆ ೨.೮೭.೮೭೨ಕ್ಕೆ ಏರಿತು. ೨೦೦೪-೦೫ರ ಹೊತ್ತಿಗೆ ೨.೩೩.೬೨೪ಗಳಷ್ಟಾದರು. ೨೧೭ ಹಳ್ಳಿಗಳಲ್ಲಿ ಕರಾವಳಿಯಲ್ಲಿ ವಾಸವಾಗಿದ್ದಾರೆ. ೮೦ರಷ್ಟು ಮೀನುಗಾರರು

ಯಾಂತ್ರಿಕ ದೋಣಿಗಳನ್ನು ಉಪಯೋಗಿಸುತ್ತಿದ್ದಾರೆ. ಮೀನುಗಾರರು ಸಾಮಾನ್ಯವಾಗಿ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಯ ವಿದ್ಯಾಭ್ಯಾಸವನ್ನು ಹೊಂದಿರುತ್ತಾರೆ.

**ಒಳನಾಡ ಮೀನುಗಾರಿಕೆ**

ರಾಜ್ಯದ ಒಳನಾಡ ಮತ್ಸ್ಯಾಭಿವೃದ್ಧಿಗೆ ಅಗತ್ಯವಾದ ೫.೨೦ಲಕ್ಷ ಹೆಕ್ಟೇರ್ ಒಳನಾಡ ಜಲಪ್ರದೇಶವಿರುತ್ತದೆ. ೨.೯೩ಲಕ್ಷ ಹೆಕ್ಟೇರ್ ಪ್ರದೇಶದ ೨೫.೦೦೦ ಕೆರೆಗಳು ಮತ್ತು ೨.೨೭ಲಕ್ಷ ಹೆಕ್ಟೇರ್ ಪ್ರದೇಶದ ೭೪ ಜಲಾಶಯಗಳು. ೮.೮೧೩ ಕಿ.ಮೀ.ಉದ್ದದ ನದಿಗಳು. ನಾಲೆಗಳಿಂದ ಸುಮಾರು ೩ರಿಂದ ೪ಲಕ್ಷ ಮೆಟ್ರಿಕ್ ಟನ್ ಮೀನು ಉತ್ಪಾದನೆ ನೋಡಬಹುದಾಗಿದೆ. ಬೇಸಿಗೆ ಕಾಲದಲ್ಲಿ ಕೆರೆ ಒಣಗಿ ಸ್ವಲ್ಪ ನೀರಿರುವ ಸಂದರ್ಭದಲ್ಲಿ ವರ್ಷದಲ್ಲಿ ಒಂದು ದಿನ ಮೀನುಗಾರರು ಮೀನು ಹಿಡಿಯುತ್ತಾರೆ.

**ತಳಿ ಮೀನುಗಳ ಬಳಕೆ**

ರಾಜ್ಯ ಪುನರ್ವಿಂಗಡಣೆ ಮುಂಚೆ ಹಾಗೂ ಕೆಲವು ವರ್ಷಗಳು ಸ್ಥಳೀಯ ಮೀನು ಮರಿಗಳನ್ನು ಸಂಗ್ರಹಿಸಿ ಕೆರೆಗಳಲ್ಲಿ ಬೆಳವಣಿಗೆಗಾಗಿ ಬಿಡಲಾಗುತ್ತಿತ್ತು. ಮೀನುಗಳು ಶೀಘ್ರವಾಗಿ ದೊಡ್ಡಗಾತ್ರಕ್ಕೆ ಬೆಳೆದು ಗಂಗಾ. ಬ್ರಹ್ಮಪುತ್ರ ಮತ್ತು ಮಹಾನದಿಗಳ ಮೀನುಗಳು ಅಂದರೆ ಕಟ್ಲಾ, ರೋಹು ಮತ್ತು ಮೃಗಾಲ್ ಮೀನು ಮರಿಗಳನ್ನು ಕಲ್ಕತ್ತದಿಂದ ನಿಯೋಜಿತ ವಿಮಾನಗಳಲ್ಲಿ ತರಿಸಿ ಕೆರೆ ಜಲಾಶಯಗಳಿಗೆ ಬೆಳವಣಿಗೆಗಾಗಿ ಬಿಡಲಾಗುತ್ತಿತ್ತು. ಈ ದೊಡ್ಡ ಗಂಡೆ ಜಾತಿಯ ಮೀನುಗಳು ಶೀಘ್ರವಾಗಿ ಬೆಳವಣಿಗೆ ಪಡೆದು ನಿಂತ ನೀರಿನಲ್ಲಿ ಮರಿ ಮಾಡುವ ಪ್ರವೃತ್ತಿ ಹೊಂದಿವೆ. ಮೀನುಗಾರಿಕೆ ವಿಜ್ಞಾನಿಗಳಾದ ಡಾ.ಹೀರಾಲಾಲ್ ಚೌಧರಿ ಮತ್ತು ಕೆ.ಎಚ್. ಲಿಲಿಕ್ಟುನಿ ಅವರು 'ಪಿಟ್ಯೂಟರಿ ಹಾರ್ಮೋನ್' ಇಂಜಕ್ಷನ್‌ನ್ನು ಪ್ರೌಢಗಂಡೆ ಜಾತಿಯ ಮೀನುಗಳಿಗೆ ನೀಡಿದರು. ಇವು ಮರಿ ಮಾಡುವಲ್ಲಿ ಯಶಸ್ವಿಯಾದವು. ಇದನ್ನು 'ಪ್ರಚೋದಿತ ಸಂತಾನೋತ್ಪತ್ತಿ' ಎಂದು ಕರೆಯುತ್ತಾರೆ. ಉತ್ತಮ ತಳಿ ಮೀನು ಉತ್ಪಾದನಾ ಮತ್ತು ಪಾಲನಾ ಕೇಂದ್ರಗಳು ಸ್ಥಾಪನೆಗೊಂಡವು.

**ವಿದೇಶಿ ಮೀನುಗಳು**

೧೯೫೬ರಲ್ಲಿ ಜಪಾನ್ ದೇಶದ ಸಾಮಾನ್ಯಗಂಡೆ(ಕಾಮನ್ ಕಾರ್ಪ್) ರಾಜ್ಯಕ್ಕೆ ತರಿಸಲಾಯಿತು. ಇದು ವರ್ಷಕ್ಕೆ ಸುಮಾರು ೩೧೪ರಿಂದ ೧.೧/೨ ಕಿ.ಗ್ರಾಂ ಉತ್ಪಾದಿಸುತ್ತಿತ್ತು. ನಿಂತ ನೀರಿನಲ್ಲಿ ಸಂತಾನೋತ್ಪತ್ತಿ ಮಾಡುವ ಪ್ರವೃತ್ತಿ ಹೊಂದಿದೆ. ಎಲ್ಲಾ ಕಾಲದಲ್ಲಿಯೂ ಮೊಟ್ಟೆ ಇಟ್ಟು ಮರಿ ಮಾಡುತ್ತದೆ. ರಾಜ್ಯದಲ್ಲಿ ಈ ಮೀನಿನ ಪಾಲನೆ ಪ್ರಸಿದ್ಧಿಯಾಗಿದೆ. ಚೀನಾದ ಬೆಳ್ಳಿಗೆಂಡೆ(ಸಿಲ್ವರ್ ಕಾರ್ಪ್), ಹುಲ್ಲುಗಂಡೆ(ಗ್ರಾಸ್ ಕಾರ್ಪ್) ೧೯೬೦ರಲ್ಲಿ ರಾಜ್ಯಕ್ಕೆ ತರಿಸಿ ಜಲಾಶಯಗಳಲ್ಲಿ ಬಿಡಲಾಯಿತು. ಈ ಮೀನುಗಳು ಶೀಘ್ರವಾಗಿ ಬೆಳೆದವು. ನಿಂತ ನೀರಿನಲ್ಲಿ ಮರಿ ಮಾಡುವುದಲ್ಲದೆ ವರ್ಷಕ್ಕೆ ಪ್ರತಿ ಮರಿಯು ೫ ಕಿ.ಗ್ರಾಂ ಬೆಳೆಯುತ್ತಿತ್ತು. ಪ್ರೌಢ ಮೀನುಗಳಿಗೆ ಪಿಟ್ಯೂಟರಿ ಹಾರ್ಮೋನಗಳಿಂದ ಪ್ರಚೋದಿಸಿ ಮರಿ ಮಾಡಲಾಗುತ್ತಿತ್ತು. ಜಿಲೇಬಿ ಮೀನು ಸಹಾ ವಿದೇಶಿ ಮೀನು. ಇದು ದೊಡ್ಡ ಗಂಡೆ ಮೀನು ಮರಿಗಳನ್ನು ಕಲ್ಕತ್ತದಿಂದ ತರಿಸಿ ಕೆರೆ ಜಲಾಶಯಕ್ಕೆ ಬಿಟ್ಟಾಗ ಅವುಗಳ ಜೊತೆ ಈ ಮೀನನ್ನು ಬಿಟ್ಟಾಗ ಹೇರಳವಾಗಿ ವೃದ್ಧಿಯಾಯಿತು. ಇವತ್ತಿಗೂ ಸಹ ಈ ಮೀನನ್ನು ಜಲಾಶಯಗಳಲ್ಲಿ ನೋಡಬಹುದು. ಇವು ಕಲುಷಿತ ನೀರಿನಲ್ಲಿ ಬೆಳೆದು ಮರಿ ಮಾಡುತ್ತವೆ. ಇವುಗಳ ಉಪಟಳದಿಂದ

ಸ್ಥಳೀಯ ಮೀನುಗಳ ಮೇಲೆ ಪ್ರಭಾವ ಬೀರುತ್ತವೆ. ೫-೬ವರ್ಷಗಳಿಂದ ೧೯೯೮-೯೯ ರಿಂದೀಚೆಗೆ ಮತ್ತೊಂದು ಅಪಾಯಕಾರಿ ಬೆಳವಣಿಗೆ ತಲೆಯೆತ್ತಿತ್ತು. "ಆಫ್ರಿಕನ್ ಕ್ಯಾಟ್‌ಫಿಶ್" ಈ ಮರಿಗಳ ಪಾಲನಾ ಕ್ರಮವನ್ನು ಸರ್ಕಾರ ನಿಷೇಧಿಸಿದೆ. ಅವುಗಳು ನೀರಿನಲ್ಲಿರುವ ಎಲ್ಲ ಮೀನುಗಳ ಆಹಾರವನ್ನು ಸೇವಿಸಿ ಬೇಗ ಬೆಳೆಯುತ್ತವೆ. ಇವು ಕಲುಷಿತ ನೀರಿನಲ್ಲಿ ಬೆಳೆಯುತ್ತವೆ. ಹಾಗೆ ಮರಿ ಮಾಡುತ್ತವೆ. ಕೋಳಿ ಮತ್ತು ಮಾಂಸದಂಗಡಿಯಲ್ಲಿ ಬಿಸಾಡಿದ ತ್ಯಾಜ ಪದಾರ್ಥಗಳಿಂದ ಬೇಗ ಬೆಳೆಯುತ್ತವೆ. ಇವು ಸ್ಥಳೀಯ ಮೀನುಗಳ ಅಸ್ತಿತ್ವವನ್ನು ನಾಶಮಾಡಿದ್ದಲ್ಲದೆ ಜಲಚರ ಜೀವಿಗಳನ್ನು ನಾಶ ಮಾಡಿವೆ.

## ಕೆರೆಕೊಳ್ಳದಲ್ಲಿ ಮತ್ಸ್ಯಾಭಿವೃದ್ಧಿ

ನಮ್ಮಲ್ಲಿ ೨೫.೮೮೨ ಕೆರೆಗಳಿದ್ದು, ೨.೯೩ ಲಕ್ಷ ಹೆಕ್ಟೇರ್ ವಿಸ್ತೀರ್ಣವನ್ನು ಕೆರೆಗಳನ್ನು ಹೊಂದಿವೆ. ಇತ್ತೀಚಿನ ಬೆಳವಣಿಗೆಯಿಂದ ಕೆರೆಗಳ ಉದ್ಯಮ, ನಗರೀಕರಣ ಪ್ರಭಾವದಿಂದ ಹೂಳು ತೆಗೆಯುವಿಕೆ, ಆವರಿಸಿಕೊಂಡ ತ್ಯಾಜ್ಯಗಳನ್ನು ತೆಗೆಯುವಿಕೆ, ಕಲುಷಿತ ನೀರನ್ನು ತೆಗೆಯುವಿಕೆ ಮಾಡಬೇಕಾಗಿದೆ. ಕೆರೆ ಮತ್ತು ನದಿಗಳ ಕೊಂಡಿ ವ್ಯವಸ್ಥೆಗೆ ಧಕ್ಕೆಯಾಗಿ ಮತ್ಸ್ಯಾಭಿವೃದ್ಧಿಗೆ ತೊಡಕಾಗಿದೆ. ೧೯೫೬-೫೭ರಲ್ಲಿ ಮೀನು ಮರಿಗಳ ಪಾಲನೆಯ ದೃಷ್ಟಿಯಿಂದ ಕೆರೆಗಳಲ್ಲಿ ಬಿಡಲಾಗಿತ್ತು. ಮಿಶ್ರ ತಳಿ ಮೀನು ಪಾಲನೆ ನಂತರದಲ್ಲಿ ಆರಂಭವಾಯಿತು. ೬ ವಿವಿಧ ಮೀನುಗಳನ್ನು ಕೆರೆಕೊಳ್ಳದಲ್ಲಿ ಬಿಟ್ಟು ಉತ್ಪತ್ತಿ ಹೆಚ್ಚಿಸಲಾಗಿದೆ. ಮೀನು ಕೃಷಿ ಅಭಿವೃದ್ಧಿ ಸಂಸ್ಥೆಯ ಅಂಗವಾಗಿ ೧೦ ಹೆಕ್ಟೇರುಗಳಿಗಿಂತ ಕಡಿಮೆ ವಿಸ್ತೀರ್ಣವಿರುವ ಕೆರೆಗಳನ್ನು ದುರಸ್ತಿಗೊಳಿಸಲಾಯಿತು. ತೀವ್ರ ಮೀನು ಪಾಲನ ಕ್ರಮವನ್ನು ಅನುಸರಿಸಿ ಹೆಚ್ಚಿನ ಪ್ರಮಾಣದ ಮೀನುಮರಿಗಳನ್ನು ಬಿಡಲಾಯಿತು. ಅವುಗಳಿಂದ ಪ್ರಾಕೃತಿಕವಾಗಿ ಆಹಾರವೃದ್ಧಿಗೆ ಬೇಕಾದ ಗೊಬ್ಬರವನ್ನು ವಿತರಿಸಲಾಯಿತು. ಅಲ್ಲದೆ ಕೃತಕ ಆಹಾರವನ್ನು ಕೊಟ್ಟು ಮೀನುಗಳು ಶೀಘ್ರವಾಗಿ ಬೆಳೆಯುವ ಸನ್ನಿವೇಶವನ್ನು ಸೃಷ್ಟಿಸಿ ಹೆಕ್ಟೇರ್‌ಗೆ ೨-೩ ಟನ್ ಮೀನು ಉತ್ಪತ್ತಿ ಮಾಡಲಾಯಿತು. ರಾಯಚೂರು, ಬಳ್ಳಾರಿ, ಗುಲಬರ್ಗಾದಲ್ಲಿ ಸಿಹಿನೀರಿನ ಮೀನು ಮತ್ತು ಸಿಗಡಿಯನ್ನು ಬೆಳೆಸಲಾಯಿತು ಮತ್ತು ಹೆಚ್ಚಿನ ಆದಾಯ ಪಡೆಯಲಾಯಿತು. ವೈಜ್ಞಾನಿಕ ವಿಧಾನಗಳಿಂದ ಒಂದು ಹೆಕ್ಟೇರ್ ಪ್ರದೇಶಕ್ಕೆ ೧೦ ಟನ್ ಮೀನನ್ನು ಉತ್ಪಾದಿಸಲಾಗಿದೆ. ಸಣ್ಣ ಕೆರೆಗಳ ಮೀನು ಪಾರ್ಖವಾರು ಹಕ್ಕನ್ನು ಪಂಚಾಯತ್‌ಗೆ ವಹಿಸಿದೆ. ದೋಡ್ಡ ಕೆರೆಗಳ ಮೀನು ಪಾರ್ಖವಾರು ಹಕ್ಕನ್ನು ತಾಲೂಕು ಪಂಚಾಯತ್ ವಹಿಸಿಕೊಂಡಿದೆ. ದೊಡ್ಡ ದೊಡ್ಡ ಜಲಾಶಯವನ್ನು ಇಲಾಖೆ ವಹಿಸಿಕೊಂಡಿದೆ. ಇಲ್ಲವೆ ಗುತ್ತಿಗೆಯನ್ನು ಸಂಘ-ಸಂಸ್ಥೆಗಳಿಗೆ ವಹಿಸಿಕೊಡಲಾಗಿದೆ. ತಾಂತ್ರಿಕ ಸಲಹೆಯನ್ನು ಮೀನುಗಾರಿಕೆ ಇಲಾಖೆ ನೀಡುತ್ತದೆ. ಮೀನು ಮರಿಗಳ ಸರಬರಾಜನ್ನು ಕೂಡ ಮಾಡುತ್ತದೆ.

## ಜಲಾಶಯಗಳಲ್ಲಿ ಮತ್ಸ್ಯಾಭಿವೃದ್ಧಿ

ಕರ್ನಾಟಕದಲ್ಲಿ ೭೫ ಜಲಾಶಯಗಳಿದ್ದು, ೧೦ ಅಡಿ ಆಳದಿಂದ ೧೦೦೦ ಅಡಿ ಆಳದವರೆಗೂ ಸದಾ ನೀರು ನಿಲ್ಲುವ ೨.೨೫ ಹೆಕ್ಟೇರ್ ಜಲಾಶಯಗಳನ್ನು ನದಿಗಳಿಗೆ ಅಡ್ಡಲಾಗಿ ಕಟ್ಟಿರುವ ಅಣೆಕಟ್ಟುಗಳನ್ನು ಬಳಸಿಕೊಳ್ಳಲಾಗಿದೆ ಆಯಾಯ ನದಿಯ ಮತ್ಸ್ಯ ಸಂಪತ್ತು ಸ್ವಲ್ಪ ಮಟ್ಟಿಗೆ ತೊಂದರೆಗೊಳಪಟ್ಟರೂ ಅವುಗಳು ಜಲಾಶಯದಲ್ಲಿ ವೃದ್ಧಿಯಾಗುತ್ತಿವೆ. ಈ ಜಲಾಶಯಗಳಲ್ಲಿ ಶೀಘ್ರವಾಗಿ ಬೆಳೆಯುವ ಕಟ್ಲಾ, ರೋಹು, ಮೃಗಲ್, ಸಾಮಾನ್ಯಗೆಂಡೆ, ಹುಲ್ಲುಗೆಂಡೆ, ಬೆಳ್ಳಿಗೆಂಡೆ, ಮೀನು ಮರಿಗಳನ್ನು ಪ್ರತಿವರ್ಷ ಗರಿಷ್ಠ ಸಂಖ್ಯೆಯಲ್ಲಿ ಬಿತ್ತಿದರೆ ಜಲಾಶಯದಿಂದ ವಾರ್ಷಿಕ ಸುಮಾರು ೨ರಿಂದ ೨.೫೦ ಲಕ್ಷ ಟನ್

ಮೀನನ್ನು ಉತ್ಪಾದಿಸಬಹುದು. ೧೯೭೦ರಲ್ಲಿ ಹೆಸರುಘಟ್ಟ ಮತ್ತು ತಿಪ್ಪಗೊಂಡನಹಳ್ಳಿ ಜಲಾಶಯದಲ್ಲಿ ಮೀನುಪಾಲನೆ ಅಳವಡಿಸಲು ಬೆಂಗಳೂರಿನ ನೀರು ಮತ್ತು ಒಳಚರಂಡಿ ವಿಭಾಗವು ಮನಸ್ಸು ಮಾಡಿತು. ಮತ್ಸ್ಯಾಭಿವೃದ್ಧಿಯಿಂದ ನೀರಿನ ಗುಣಮಟ್ಟ ಹೆಚ್ಚಿಸುವುದು ಮತ್ತು ಮತ್ಸ್ಯಾಪಾಲನ ನಿರ್ವಹಣಾ ಜವಾಬ್ದಾರಿಯನ್ನು ಮೀನುಗಾರಿಕೆ ಇಲಾಖೆಗೆ ವಹಿಸಲಾಯಿತು. ಬೊಮ್ಮನಹಳ್ಳಿ ಸೋಪ, ಶರಾವತಿ, ಟೈಲ್‌ರೈಸ್ ಮುಂತಾದ ಜಲಾಶಯಗಳ ಅಮೂಲಾಗ್ರ ಅಭಿವೃದ್ಧಿಗೆ ಸೂಕ್ತ ಸಲಹೆ, ಮಾರ್ಗದರ್ಶನಗಳನ್ನು ನೀಡಲು ಒಂದು ಜಲಾಶಯ ಮತ್ಸ್ಯ ಪಾಲನೆ ಅಭಿವೃದ್ಧಿ ಸಮಿತಿ ರಚನೆಯಾಗಿದೆ. ವಿ.ವಿ.ಸಾಗರ, ಗಂಗೋತ್ರಿ, ಶಾಂತಿಸಾಗರ ಮತ್ತು ಜೋರನಕಣಿವೆಗಳಲ್ಲಿ ಮೀನು ಅಭಿವೃದ್ಧಿ ಇಲಾಖೆಯು ಅನುಮತಿ ನೀಡಿದೆ. ಕೇಂದ್ರ ಸರ್ಕಾರವು ೨೦೦೩-೪ರಲ್ಲಿ ಹೆಸರುಘಟ್ಟ ಮತ್ತು ಮಾರ್ಕೋನಹಳ್ಳಿ ಜಲಾಶಯಗಳಲ್ಲಿ ತೀವ್ರ ಮೀನುಪಾಲನಾ ಅಭಿವೃದ್ಧಿಗೆ ೪೦ಲಕ್ಷ ರೂಪಾಯಿ ಅನುದಾನ ಕೊಟ್ಟಿದೆ. ರಾಜ್ಯದ ಜಲಾಶಯಗಳಲ್ಲಿ ಮತ್ಸ್ಯಾಭಿವೃದ್ಧಿಗೆ ಮೀನುಗಾರಿಕೆ ಇಲಾಖೆ ಹೆಚ್ಚಿನ ಆಸಕ್ತಿ ವಹಿಸಿದೆ.

**ನದಿಗಳಲ್ಲಿ ಮತ್ಸ್ಯಾಭಿವೃದ್ಧಿ**

ಕರ್ನಾಟಕದಲ್ಲಿ ೫೮೧೩ ಕಿ.ಮೀ. ಉದ್ದದ ನದಿಗಳಿವೆ. ಮೀನುಗಳ ಸ್ಥಿತಿಗತಿಗಳ ಸಮೀಕ್ಷೆಗಾಗಿ ೧೯೬೦-೭೦ರಲ್ಲಿ ಎರಡು ಮೀನುಗಾರಿಕೆ ಸಮೀಕ್ಷಾ ಕೇಂದ್ರಗಳನ್ನು ಶಿವಮೊಗ್ಗ ಮತ್ತು ಮೈಸೂರಿನಲ್ಲಿ ಸ್ಥಾಪಿಸಲಾಯಿತು. ನದಿಗಳು ಉತ್ಪಾದಿಸುವ ಮೀನುಗಳ ಸಮೀಕ್ಷೆಯ ಕಡತವನ್ನು ನೀಡಲಾಯಿತು. ಉತ್ಪತ್ತಿಯನ್ನು ಹೆಚ್ಚಿಸಲು ಸ್ಥಳೀಯ ಮೀನುಗಳ ಸಂರಕ್ಷಣೆ ಮತ್ತು ದೊಡ್ಡಗಂಡೆ ಜಾತಿ ಮೀನು ಮರಿಗಳನ್ನು ಬೆಳವಣಿಗೆಗೆ ಕ್ರಮಕೈಗೊಳ್ಳಲಾಯಿತು. ಪಶ್ಚಿಮ ಘಟ್ಟದ ಕೆಮ್ಮಣ್ಣು ಗುಂಡಿಯ ಶಂಕರ ಜಲಪಾತದ ಬಳಿ ಟ್ರೌಟ್ ಮೀನು ಮರಿಗಳನ್ನು ಬಿಡಲಾಯಿತು.

**ಮತ್ಸ್ಯಧಾಮಗಳು:** 'ಮಹಾಶೀರ್'(ಬಿಳಿಮೀನು), ಪ್ರಖ್ಯಾತ ಮೀನು, ಗೇಮ್ ಫಿಶ್ ನಮ್ಮ ನದಿಗಳಲ್ಲಿ ಸಿಗುತ್ತವೆ. ರಾಮನಾಥಪುರ, ರಂಗನತಿಟ್ಟು, ಶಿಶಿಲ, ಸಂಗಮ, ಬಚ್ಚನಾಯಕನಗುಂಡಿ, ತೋಡಿಕಾನ, ತಿಂಗಳೇ, ಶೃಂಗೇರಿ, ಜಮ್ಮಟಗಿ, ಚಂಪಗುಡ್ಡ, ಮತ್ಸ್ಯಧಾಮಗಳು ಸರ್ಕಾರದ ಆದೇಶದ ಪ್ರಕಾರ ಸಂರಕ್ಷಿತ ಪ್ರದೇಶವೆಂದು ಘೋಷಣೆಯಾಗಿದೆ. ಇನ್ನುಳಿದ ಮತ್ಸ್ಯಕೇಂದ್ರಗಳಲ್ಲಿ ಇಲಾಖೆ ಘೋಷಣೆ ಮಾಡಬೇಕಾಗಿದೆ. ಪಶ್ಚಿಮ ಘಟ್ಟ ಯೋಜನೆಯಲ್ಲಿ ಹಾಲಾಗಿರುವ ಜಲಾಶಯದ ಬಳಿ ಮತ್ಸ್ಯಕೇಂದ್ರಗಳಲ್ಲಿ ೧೯೯೮-೯೯ರಲ್ಲಿ ಮಾರ್ಗಶಿರ್ ತಳಿಯನ್ನು ಉತ್ಪತ್ತಿ ಮಾಡಲು ಪ್ರಯತ್ನ ನಡೆದಿವೆ.

**ಮೀನು ಮಾರಾಟ**

ಕೆರೆ ಜಲಾಶಯಗಳಲ್ಲಿ ಮೀನು ಉತ್ಪತ್ತಿ ಮಾರಾಟ ಮಾಡುವುದು ವಾಡಿಕೆ. ಉಳಿದ ಮೀನನ್ನು ತಾಲೋಕು ಕೇಂದ್ರಕ್ಕೆ ತಂದು ಮಾಡುತ್ತಾರೆ. ಮೊದಲಿಗೆ ಮಾರಾಟ ವ್ಯವಸ್ಥೆ ತುಂಬ ಕಷ್ಟಕರವಾಗಿತ್ತು. ೧೯೫೮-೬೫ರ ವರೆಗೆ ವಿವಿ.ಸಾಗರ, ತುಂಗಭದ್ರ, ಕೆ. ಆರ್. ಸಾಗರ, ಬೆಳಂದೂರು ಕೆರೆಗಳಲ್ಲಿ ೨.ಕೆ.ಜಿ ಗಿಂತ ಹೆಚ್ಚಿನ ತೂಕದ ಕಟ್ಲ, ರೋಹು, ಮೃಗಲ್ ಮೀನುಗಳನ್ನು ಮಂಜುಗಡ್ಡೆಯಲ್ಲಿ ಶೇಖರಿಸಿ ಮರದ ಪೆಟ್ಟಿಗೆಗಳ ಸಹಾಯದಿಂದ ಬೆಂಗಳೂರಿನಿಂದ ಮದ್ರಾಸಿಗೆ,

# ಅಧ್ಯಾಯ ೩

## ಕರಾವಳಿಯಲ್ಲಿ ಮೀನುಗಾರಿಕೆ ವಿಧಿ-ವಿಧಾನಗಳು

ಕರಾವಳಿ ಜಿಲ್ಲೆಗಳಾದ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿವೆ. ಮೀನುಗಾರಿಕೆಯನ್ನು ನಂಬಿ ಹಲವಾರು ಕುಟುಂಬಗಳು ಜೀವನವನ್ನು ನಡೆಸುತ್ತಿವೆ. ಸಮುದ್ರವನ್ನು ಗೌರವಿಸುವ ಹಾಗೂ ಪೂಜಿಸುವ ಮೀನುಗಾರರ ಕುಟುಂಬಗಳು ಸಮುದ್ರದ ಮೇಲೆ ಸಂಪೂರ್ಣ ಅವಲಂಬಿತವಾಗಿವೆ. ಈ ಕುಟುಂಬ ಬಂಗುಡೆ, ಭೂತಾಯಿ, ಸೀಗಡಿ, ಕಾಣೆ, ಮಾಂಜಿ, ಅಂಜಾಲ್, ಕೇದೆಲ್, ಮಾದಿಮ್ಮಾಳ್, ಬಲ್ಲಾರ್, ತೊರ್ಕೆ, ಅಡೆ, ಜೊಲ್ಲೆಂಜೀರ್, ಕೊಲ್ಲಿತರು, ಕಲ್ಲೂರು, ಕೊಡ್ವಾಯಿ ಮುಂತಾದ ಮೀನುಗಳನ್ನು ಸಮುದ್ರದಲ್ಲಿ ಹಿಡಿದು ಅವುಗಳ ಮಾರಾಟದ ಮೂಲಕ ಬದುಕನ್ನು ಸಾಗಿಸುತ್ತಾರೆ. ಆರಂಭದಲ್ಲಿ ನಾಡ ದೋಣಿಗಳು ನಂತರ ಯಾಂತ್ರಿಕ ದೋಣಿಗಳ ಮೂಲಕ ಮೀನು ಹಿಡಿಯಲಾಗುತ್ತಿತ್ತು. ಇಲ್ಲಿ ಮೀನು ಹಿಡಿಯುವವರನ್ನು ಮೊಗವೀರರು ಅಥವಾ ಬೆಸ್ತರು ಎಂದು ಕರೆಯುತ್ತಾರೆ. ಪಶ್ಚಿಮ ಅರಬ್ಬಿ ಸಮುದ್ರವು ತುಳುನಾಡಿನ ಜನರಿಗೆ ವರದಾನವಾಗಿದೆ. ಅನೇಕ ಬಂದರು ಪಟ್ಟಣಗಳ ಹುಟ್ಟಿಗೂ ಕಾರಣವಾಗಿದೆ.

**ಮೊಗವೀರರು:**

ಅಬ್ಬರದಿಂದ ಭೋರ್ಗರೆವ ಕಡಲು, ಪ್ರತಿ ಸೆಕೆಂಡಿಗೂ ದಡೆಗೆ ಅಪ್ಪಳಿಸುತ್ತಿರುವ ತೆರೆಗಳು, ಪದೇ ಪದೇ ಸಂಭವಿಸುವ ಪ್ರವಾಹ, ಮಾರುತಗಳು ಹೊತ್ತು ತರುವ ಅಪಾಯಗಳು ಇಂತಹ ಕಡಲ ಅಂಗಳದಲ್ಲಿ ದುಡಿಮೆ ಹಾದಿಯನ್ನು ಕಟ್ಟಿಕೊಂಡಿರುವ ಬೆಸ್ತರ ಬದುಕು ನಿಜವಾಗಿಯೂ ಸಾಹಸಮಯ. ಮಾನವನಿಗೆ ಮಣ್ಣು ಹೇಗೆ ಮುಖ್ಯವೋ ಹಾಗೆ ಕಡಲೂ ಸಹ ಅಷ್ಟೇ ಮುಖ್ಯವಾಗಿದೆ. ಕಡಲಿನ ಉತ್ಪನ್ನಗಳು ನಮ್ಮ ದೇಶವನ್ನು ಸಮೃದ್ಧವನ್ನಾಗಿಸಿದೆ. ಮೀನುಗಾರಿಕೆ ನಮ್ಮ ರಾಷ್ಟ್ರದ ಅತಿ ದೊಡ್ಡ ಉದ್ಯಮವಾಗಿದೆ. ದೇಶ ಮೂರು ಭಾಗವು ಸಮುದ್ರದಿಂದ ಆವೃತವಾಗಿದ್ದು, ಒಂದು ಪರ್ಯಾಯ ದ್ವೀಪವೆನಿಸಿದ ಭಾರತವು ಮೀನುಗಾರಿಕೆಗೆ ಹೆಚ್ಚಿನ ಅವಕಾಶ ಕಲ್ಪಿಸಿದೆ. ಕರ್ನಾಟಕದಲ್ಲಿ ಬೆಸ್ತರನ್ನು ಮೊಗವೀರ, ಮರಕಾಲ, ಪಟ್ಟದವ, ಬೋವಿ, ನಾಯಕ(ನಾವಿಕ), ಗಂಗಾಮತಸ್ಥ, ಅಂಬಿಗ, ಖಾರ್ವಿ ಮುಂತಾದ ನಾಮಧೇಯಗಳಿಂದ ಗುರುತಿಸಲಾಗುತ್ತಿವೆ. ಕರಾವಳಿಯಲ್ಲಿ ಮುಖ್ಯವಾಗಿ ಬೆಸ್ತರನ್ನು 'ಮೊಗೇರ'ಎಂದು ಹಿಂದಿನ ಕಾಲದಲ್ಲಿ ಕರೆಯುತ್ತಿದ್ದರೆಂದು ವೆಂಕಟರಾಜ ಪುಣಿಂಚಿತ್ತಾಯ ಅವರ 'ಮೊಗವೀರರು' ಎನ್ನುವ ಪುಸ್ತಕದಿಂದ ತಿಳಿದುಬಂದಿದೆ. ಹಾಗೆಯೇ ಮರಕಾಲ ಎನ್ನುವ ಇನ್ನೊಂದು ಹೆಸರು ಸಹ ಇದೆ. ಮೊಗೇರ, ಮರಕಾಲ ಎಂಬ ಎರಡು ಹೆಸರುಗಳು ಹೋಗಿ ಈಗ ಮೊಗವೀರರು ಎಂಬ ಹೆಸರು ಸಾರ್ವತ್ರಿಕರಣಗೊಂಡಿದೆ.

**ಮೀನುಗಾರಿಕೆ:**

ಮೊಗವೀರರು ಪ್ರಾಚೀನಕಾಲದಿಂದಲೂ ತಮ್ಮ ಜಾತಿಯ ಕುಲಕಸಬಾಗಿ ಮೀನುಗಾರಿಕೆಯನ್ನೇ ಮಾಡಿಕೊಂಡಿರುವವರು ಮತ್ತು ಅದರಲ್ಲಿಯೇ ಪಳಗಿದವರು. ಮೀನುಗಾರಿಕೆಗೆ ಮುಖ್ಯವಾಗಿ ಬೇಕಾಗಿರುವುದು ದೋಣಿ ಮತ್ತು ಬಲೆ. ಯಾವುದೇ ಒಂದು ಇಲ್ಲವಾದರೂ ಪ್ರಯೋಜನವಿಲ್ಲ. ಎರಡೂ ಪರಸ್ಪರ ಪೂರಕ ಸಾಧನಗಳು.

ಕರಾವಳಿಯಲ್ಲಿ ೫೦ ರೀತಿಯ ಬಲೆಗಳಿವೆ. ಇಡೆ ಬಲೆ. ಎಲ್ಯಬಲೆ. ಏಳಬಲೆ. ಐರ್ಬಲೆ. ಓಡುಬಲೆ. ಕಂಕಟ್ಟಬಲೆ. ಕಂತಬಲೆ. ಕಾಂಡಯಬಲೆ. ಕುಟ್ಟಬಲೆ. ಕೂರಿಬಲೆ. ಕೈರಂಪಣಿ(ಕೈರಾರ್ಪಣಿ) ಗೊರ್ತುಬಲೆ. ನೆಗರ್‌ಬಲೆ. ತಟ್ಟಬಲೆ. ಪತ್ತಿರ್ಲೆ. ಪಾರ್ಲೆ. ಬೀಡಿನಬಲೆ(ಬಿಸುವ ಬಲೆ) ಬುಡ್ಡಲೆ. ಭೂತಾಯಿ ಬಲೆ. ಬೋಜಂಜೆರ್ ಬಲೆ. ಮರಗಿ ಬಲೆ. ಮಾರ್ಟ್‌ಬಲೆ(ಮಾಯಿಟ್‌ಬಲೆ). ಮಾರಿಬಲೆ. ಮಾಂಜಿಬಲೆ. ರಾಣಿಬಲೆ. ತೊರಕೆದಬಲೆ. ಹಾರ್‌ಚಟ್ಲೆಬಲೆ. ಡಿಸ್ಕೊಬಲೆ. ಟ್ರೋಲ್ ಬಲೆ. ಜೋಡಿ ಟ್ರೋಲ್ ಬಲೆ. ಪರ್ಸೀನ್‌ಬಲೆ.

**ಮೀನುಗಾರಿಕೆಯ ವಿಧಿ-ವಿಧಾನಗಳು**

**ಮಾರಿಬಲೆ ಅಥವಾ ರಂಪಣಿ ಬಲೆ**

ಹದಿನೆಂಟನೇ ಶತಮಾನದ ಆರಂಭದಲ್ಲಿ ಕರ್ನಾಟಕದ ಕರಾವಳಿಗೆ ಈ ಬಲೆಗಳ ಉಪಯೋಗ ತಿಳಿಯಿತು. ೧೯೪೫ರಲ್ಲಿ ನೂರಕ್ಕೂ ಹೆಚ್ಚು ಜನರಿಗೆ ಉದ್ಯೋಗದ ಅವಕಾಶಗಳನ್ನು ಕಲ್ಪಿಸುವ ಉದ್ದೇಶದಿಂದ ಮಾರಿಬಲೆಯ ಸಂಶೋಧನೆ ಮೀನುಗಾರಿಕೆಯ ಜಗತ್ತಿನಲ್ಲಿ ಒಂದು ಹೊಸ ಬೆಳಕನ್ನೇ ಸೃಷ್ಟಿಸಿತು. ಈ ಬಲೆಯ ಆವಿಷ್ಕಾರ ಗೋವಾದಲ್ಲಿ ಆಯಿತು. ನಂತರ ಕರ್ನಾಟಕಕ್ಕೆ ತರಲಾಯಿತು.

**ರಂಪಣಿ ಬಲೆಯ ವಿಶೇಷತೆ**

ದೊಡ್ಡದಾದ ದೋಣಿ ಅಥವಾ ಪಡುವು ಈ ಬಲೆಗೆ ಅತೀ ಅವಶ್ಯಕ ಹೆಸರೇ ತಿಳಿಸುವಂತ ಮಾರಿಬಲೆ-ಮಾರಿಬಲೆ= ಅತ್ಯಂತ ಉದ್ದವಾದ ಬಲೆ. ಮೈಲುಗಟ್ಟಲೇ ಉದ್ದದ ಬಲೆಯನ್ನು ಅಚ್ಚುಕಟ್ಟಾಗಿ ಮಡಚಿ ಪಡುವಿನಲ್ಲಿಟ್ಟುಕೊಂಡು ಮೀನುಗಾರರು ಒಂದು ತಂಡದೊಂದಿಗೆ ಸಮುದ್ರಯಾನ ಆರಂಭಿಸುತ್ತಾರೆ. ಕಡಲು ಶಾಂತವಾಗಿರುವ ವೇಳೆ. ಮೊದಲಿಗೆ ಇಬ್ಬರು ಮೂವರು ಬೆಸ್ತರು ಕೊಂತಲ ಅಂದರೆ ಸಣ್ಣ ದೋಣಿಯಲ್ಲಿ ಕುಳಿತುಕೊಂಡು ಮೀನಿನ ರಾಶಿ ಹುಡುಕಲು ಆರಂಭಿಸುತ್ತಾರೆ. ನೀರಿನ ಬದಲಾದ ಬಣ್ಣ ಅಥವಾ ಕದಡಿದ ತೆರೆಗಳು ಮೀನಿನ ರಾಶಿ ಇರುವುದನ್ನು ತಿಳಿಸುತ್ತದೆ. ಅದನ್ನು ತಿಳಿದುಕೊಂಡ ಕೊಂತಲದಲ್ಲಿರುವ ಮೀನುಗಾರರು ದಡದಲ್ಲಿರುವ ರಂಪಣಿ ಬಲೆಯ ಸಹಾಯಕರಿಗೆ ನಿಶಾನೆಯ ಮೂಲಕ ತಿಳಿಸುತ್ತಾರೆ. ವಿಷಯ ತಿಳಿದ ಕೂಡಲೇ ತೀರದಲ್ಲಿರುವ ಮೀನುಗಾರ ಸಹಾಯಕರು ಅಲ್ಲಿಗೆ ಬರುತ್ತಾರೆ. ಬಲೆಯ ಒಂದು ತುದಿಯನ್ನು ಆಳ ಕಡಲಿಗೆ ಇಳಿಮುಖ ಸಾಗುತ್ತ ಹೋಗುತ್ತಾರೆ. ಮೀನುಗಳು ರಾಶಿ ಬಲೆಯ ಒಳಗೆ ಸಿಕ್ಕಿದೊಡನೆ ಬಲೆಯನ್ನು ಎಲ್ಲಾ ಸಹಾಯಕರು ಒಂದೇ ಸಮನೇ ಅದನ್ನು ಒಡಿದು ಜಗ್ಗುತ್ತಾರೆ. ದಡಕ್ಕೆ ತಂದ ಮೀನನ್ನು ಹಾರಾಜು ಮಾಡುತ್ತಾರೆ. ಮಾರಿಬಲೆ ಎಂಬುದು ಮೀನುಗಾರಿಕೆಯ ದೊಡ್ಡ ಘಟಕ. ಇದರಲ್ಲಿ ಸುಮಾರು ೩೦ ರಿಂದ ೧೦೦ರವರೆಗೆ ಸದಸ್ಯರಿರಬಹುದು. ಅವರೆಲ್ಲರು ಆ ಮೀನಿನ ಪಾಲುದಾರರಾಗಿರುತ್ತಾರೆ. ಬಲೆಯ ಯಜಮಾನನಿಗೆ 'ತಂಡಲ'ನೆಂದು ಹೆಸರು. ತಂಡಲನ ಕೈ ಕೆಳಗೆ ಎರಡು ಅಥವಾ ನಾಲ್ಕು ಮಂದಿ ಸಹಾಯಕರಿರುತ್ತಾರೆ. ಮುಖ್ಯ ಸಹಾಯಕರಾದ ಇವರನ್ನು ಗುರಿಕಾರರು ಎಂದು ಕರೆಯುತ್ತಾರೆ. ಜ್ಯಾತಿಗುರಿಕಾರರು ಬೇರೆ. ಇವರೇ ಬೇರೆ. ಇವರೆಲ್ಲರ ಆಯಾಮಗಳನ್ನು ಬರೆದಿಡಲು ಗುಮಾಸ್ತ ನಿರುತ್ತಾನೆ.

### ಮರಗಿ ಬಲೆ

ಈ ಬಲೆಯು ಬಲೆಗಳಲ್ಲಿ ಅತ್ಯಂತ ಚಿಕ್ಕ ಬಲೆಯಾಗಿರುತ್ತದೆ. ಇದರಲ್ಲಿ ಒಬ್ಬನೇ ಒಬ್ಬ ವ್ಯಕ್ತಿ ಕೂತು ಮೀನು ಹಿಡಿಯಬಹುದು. ಚಟ್ಲೆ, ಬಂಗುಡೆ, ಅಡಮೀನು, ಗುರ್ಕು ಮೀನುಗಳನ್ನು ಹಿಡಿಯಬಹುದು. ನುರಿತ ಮೀನುಗಾರರು ದೋಣಿಯಲ್ಲಿ ಮೈಲುಗಟ್ಟಲೆ ಸಂಚರಿಸುತ್ತಾರೆ. ಈ ಬಲೆಯಲ್ಲಿ ೨ ಪ್ರಭೇದಗಳಿವೆ. ಹಾರ್‌ಚಟ್ಲೆ ಬಲೆ, ತಾರಲೆ ಬಲೆ.

### ಹಾರ್‌ಚಟ್ಲೆಬಲೆ

ಹಾರ್‌ಚಟ್ಲೆ ಬಲೆಯ ವಿಶೇಷವೆಂದರೆ ಸಂಜೆ ಕಡಲಿಗೆ ಹೋಗಿ ಬಲೆಗೆ ಕಲ್ಲು ಕಟ್ಟಿಬರುತ್ತಾರೆ. ಬೆಳಗ್ಗೆ ಹೋಗಿ ಅದರಲ್ಲಿ ಸಿಕ್ಕಿಹಾಕಿಕೊಂಡಿರುವ ಮೀನುಗಳನ್ನು ತರುತ್ತಾರೆ. ಸಾಮಾನ್ಯವಾಗಿ ಹಾರ್‌ಚಟ್ಲೆ, ಕಪ್ಪಳಕೆ, ಚೆಟ್ಲಿ, ಮಾಂಜಿ ಮುಂತಾದವು ಸಿಕ್ಕಿಹಾಕಿಕೊಳ್ಳುತ್ತವೆ.

### ತಾರಲೆ ಬಲೆ

ತಾರಲೆ ಬಲೆಯಿಂದ ಭೂತಾಯಿ, ರಬ್ಬಾಯಿ, ಮಣಗು ಮೀನುಗಳು ಸಿಗುತ್ತವೆ.

### ಬೀಡಿನಬಲೆ

ಇವುಗಳನ್ನು ರಾತ್ರಿ ವೇಳೆ ಮೀನು ಹಿಡಿಯಲು ಉಪಯೋಗಿಸುತ್ತಾರೆ. ಈ ದೋಣಿಗಳಲ್ಲಿ ಮೂರರಿಂದ ನಾಲ್ಕು ಜನವಿರಬಹುದು. ನಾಲ್ಕು ಗಂಟೆಗೆ ದಡದಿಂದ ಮೀನುಗಾರರು ಹೊರಟರೇ ರಾತ್ರಿಯಿಡೀ ಸಮುದ್ರದಲ್ಲಿದ್ದು ಬೆಳಗ್ಗೆ ಹಿಂದಿರುಗುತ್ತಾರೆ. ಶ್ಯಾಡಿ, ಚಾಟಿ, ಗೇದಾರ, ಹಾಯಮೀನು, ಮಂಜು ಮೀನುಗಳನ್ನು ಹಿಡಿಯುತ್ತಾರೆ.

### ಪಟ್ಟೆಬಲೆ

ಎರಡು ದೋಣಿಗಳಿಂದ ೫ ಜನರು ರಾತ್ರಿ ಹಗಲೆನ್ನದೇ ಮೀನು ಹಿಡಿಯುತ್ತಾರೆ. ತಿಂಗಳ ಬೆಳಕು ಇರುವ ದಿನಗಳಲ್ಲಿ ಮೀನುಗಾರಿಕೆ ನಡೆಸುವುದಿಲ್ಲ. ಬೇರೆ ದಿನಗಳಲ್ಲಿ ಮೀನುಗಾರಿಕೆ ಮಾಡುತ್ತಾರೆ. ಒಂದು ತುದಿಯನ್ನು ದೋಣಿಗೆ ಕಟ್ಟಿ, ಇನ್ನೊಂದು ತುದಿಯನ್ನು ಮತ್ತೊಂದು ದೋಣಿಗೆ ಕಟ್ಟಿಕೊಂಡು ಮೀನು ಹಿಡಿಯುತ್ತಾರೆ. ಈ ಬಲೆಯಿಂದ ಬಂಗುಡೆ, ಚಟ್ಲೆ, ಕೊಡಬಿ (ಕೊಡುವಾಯಿ) ಮೀನು ಸಿಗುತ್ತದೆ. ಮೀನುಗಾರಿಕೆ ನಡೆಸಲು ಉಪಯೋಗಿಸುವ ಕೆಲವು ಬಲೆಗಳನ್ನು ಮಾತ್ರ ಉಲ್ಲೇಖಿಸಿದೆ. ಬೇರೆ ಬೇರೆ ಊರುಗಳಲ್ಲಿ ಬೇರೆ ಬೇರೆ ಹೆಸರಿನಿಂದ ಈ ಬಲೆಗಳಿಗೆ ಕರೆಯುತ್ತಾರೆ. ಹಳೆಯ ಬಲೆಗಳ ಬಳಕೆ ಮೂಲೇ ಗುಂಪಾಗಿದೆ. ಹೊಸ ಯಾಂತ್ರಿಕ ದೋಣಿಗಳು ಪ್ರಚಾರಕ್ಕೆ ಬಂದಿದೆ. ಈ ದೋಣಿಗಳಿಗೆ ಸರಕಾರದಿಂದ ಅನುದಾನವು ಸಿಗುತ್ತಿದೆ. ಅವುಗಳು ಹೆಚ್ಚು ಜನಪ್ರಿಯವಾಗಿವೆ.

### ಯಾಂತ್ರಿಕ ದೋಣಿ

ದೈಹಿಕ ಶ್ರಮವನ್ನು ಕಡಿಮೆ ಮಾಡಲು ಹೆಚ್ಚು ಹೆಚ್ಚು ಮೀನುಗಳನ್ನು ಹಿಡಿಯುವ ಉದ್ದೇಶದಿಂದ ಈ ದೋಣಿಗಳ ಅವಿಷ್ಕಾರ ಮಾಡಲಾಯಿತು. ಯಾಂತ್ರಿಕ ದೋಣಿಗಳನ್ನು ಎರಡು ವಿಧದಲ್ಲಿ ನೋಡಬಹುದಾಗಿದೆ. ಟ್ರೋಲ್ ಬೋಟು, ಪರ್ಸೀನ್ ಬೋಟು.

**ಟ್ರೋಲ್ ಬೋಟು**

ಈ ಬೋಟು ಎಲ್ಲಾ ಬೋಟುಗಳಿಗಿಂತ ಅತ್ಯಂತ ಸಣ್ಣದು. ಇದಕ್ಕೆ ೫ ಜನರು ಬೇಕಾಗುತ್ತಾರೆ. ಒಂದು ಬಲೆಯನ್ನು ಕಡಲಾಳಕ್ಕೆ ಇಳಿಸಿ, ಉದ್ದಕ್ಕೆ ಎಳೆದುಕೊಂಡು ಹೋಗುತ್ತಾರೆ. ಈ ಮೂಲಕ ಮೀನುಗಳು ಸಿಕ್ಕಿಹಾಕಿಕೊಳ್ಳುತ್ತವೆ. ಲಭ್ಯವಿರುವ ಮೀನುಗಳಲ್ಲಿ ಸೀಗಡಿ/ಚಟ್ಲೆ ಹೆಚ್ಚಾಗಿರುತ್ತದೆ.

**ಪರ್ಸೀನ್ ಬೋಟು**

ಈ ಬೋಟು ದೊಡ್ಡದಾಗಿದ್ದು ಇದರ ಹಿಂದೆ ಸಣ್ಣ ಡಿಂಗಿ ದೋಣಿ ಇರುತ್ತದೆ. ಸಿಕ್ಕಿರುವ ಮೀನುಗಳನ್ನು ವೇಗವಾಗಿ ದಡಕ್ಕೆ ಸಾಗಿಸಲು ಫಿಷಿಂಗ್ ಟ್ರಾಲ್ ಬೋಟು ಕ್ಯಾರಿಯರ್ ಆಗಿ ಕಾರ್ಯನಿರ್ವಹಿಸುತ್ತದೆ. ೨೫ ಜನರು ಸಹಾಯಕ ಮೀನುಗಾರರಿದ್ದು ೫೦೦ ಮೀಟರ್ ಉದ್ದದ ಬಲೆಯು ಬೇಕಾಗುತ್ತದೆ.

**ಹಿಡಿಯುವ ವಿಧಾನ**

ಅನುಭವಿ ಮೀನುಗಾರರು ಮೀನಿನ ತೆಪ್ಪಲು ಇರುವ ಸ್ಥಳವನ್ನು ಗುರುತಿಸುತ್ತಾರೆ. ಚಾಲಕರು ಮತ್ತು ಸಹಾಯಕರು ಬಲೆಯು ಒಳಗೆ ಬರುವಂತೆ ವೃತ್ತಾಕಾರದಲ್ಲಿ ಬಲೆ ಹರಡುತ್ತಾರೆ. ಬಲೆಯ ತಳ ಭಾಗದಲ್ಲಿ ಸೀಸದ ಮಣಿ, ಮೇಲ್ಭಾಗದಲ್ಲಿ ಚಂಡು ಇರುತ್ತದೆ. ಹಾಗೆ ಎಳೆಯುತ್ತಾ ಒಂದು ಲಿಫ್ಟ್‌ನ ಸಹಾಯದಿಂದ ಕ್ಯಾರಿಯರ್ ಬೋಟಿಗೆ ತುಂಬಿಸುತ್ತಾರೆ. ಈ ಬೋಟು ದಡಕ್ಕೆ ಬಂದು ಒಂದು ಪ್ರಾಂಗಣಕ್ಕೆ ಸುರಿಯುತ್ತದೆ. ಮಧ್ಯವರ್ತಿಗಳ ಮೂಲಕ ಮೀನನ್ನು ಗುತ್ತಿಗೆದಾರರಿಗೆ ಹರಾಜು ಹಾಕುತ್ತಾರೆ. ಗುತ್ತಿಗೆದಾರರು ಅವರ ಪಾಲಿನ ಮೀನುಗಳನ್ನು ಐಸ್ ಸೇರಿಸಿ ಪ್ಲಾಸ್ಟಿಕ್ ಪೆಟ್ಟಿಗೆಗಳಲ್ಲಿ ಬೇರೆ ಬೇರೆ ಮಾರುಕಟ್ಟೆಗಳಿಗೆ ವಾಹನಗಳ ಮೂಲಕ ಸಾಗಿಸುತ್ತಾರೆ.

**ಮೀನು ಸಂಸ್ಕಾರಣ ಕೇಂದ್ರ**

ಹಿಂದಿನ ಕಾಲದಲ್ಲಿ ಮೀನುಗಾರರು ಮಾರಿ ಬಲೆಗಳ ಮೂಲಕ ಮೀನುಗಳನ್ನು ಹಿಡಿದು ಸಂಸ್ಕರಣ ಕೇಂದ್ರ(ಕಮನ್ ಅಥವಾ ಕವಣಿ)ದಲ್ಲಿಡುತ್ತಿದ್ದರು. ಹಲವಾರು ಮೀನು ಸಂಸ್ಕರಣ ಘಟಕಗಳು ಇಲ್ಲಿವೆ. ಮೀನುಗಳಿಗೆ ಉಪ್ಪು ಸೇರಿಸಿ ಚೆನ್ನಾಗಿ ಒಣಗಿಸಿ, ಜೋಪಾನವಾಗಿರಿಸುತ್ತಿದ್ದರು. ಒಳ್ಳೆಯ ದರ ಬಂದಾಗ ವ್ಯಾಪಾರ ಮಾಡುತ್ತಿದ್ದರು. ಈಗ ಆಧುನಿಕ ಸುಧಾರಿತ ಮೀನು ಸಂಸ್ಕರಣ ಘಟಕಗಳು ತೆರೆದು ಮೀನುಗಾರರಿಗೆ ನೆರವಾಗಿವೆ. ಕ್ಯಾನಿಂಗ್, ಫಿಶ್‌ಮಾಲ್, ಫಿಶ್‌ನಿಂದ ಎಣ್ಣೆ ತೆಗೆಯುವ ಘಟಕ, ಮೀನಿನ ಗೊಬ್ಬರ ಸಂಸ್ಕರಣ ಘಟಕ ಮುಂತಾದವು.

ಮತ್ಸ್ಯೋದ್ಯಮದಲ್ಲಿ ಅತ್ಯಂತ ಪ್ರಗತಿ ಸಾಧಿಸಿದ ಜಿಲ್ಲೆಗಳಿವು. ಸಮುದ್ರ ಮೀನುಗಾರಿಕೆ ಸಂಸ್ಕರಣಾ ಕೈಗಾರಿಕೆಗಳು ಹೆಸರುವಾಸಿಯಾಗಿದೆ. ಕೊಚ್ಚಿ, ಮುಂಬಯಿಗಳ ಹಾಗೇ ಸಮುದ್ರೋತ್ಪನ್ನವನ್ನು ವಿದೇಶಕ್ಕೆ ರಫ್ತು ಮಾಡುತ್ತಾರೆ. ಕೇರಳವಾದ

ಧನ ಸಂಪಾದನೆ ಇದರಿಂದ ಸಾಧ್ಯವಾಗಿದೆ.ಹಾಳಾಗಿರುವ ಜಲಾಶಯದ ಬಳಿ ಮತ್ಸ್ಯಕೇಂದ್ರಗಳನ್ನು ೧೯೯೮-೯೯ರಲ್ಲಿ ಮಾಗ್‌ಶಿರ್ ತಳಿಯನ್ನು ಉತ್ಪತ್ತಿ ಮಾಡಲು ಪ್ರಯತ್ನಗಳು ನಡೆದಿವೆ.

**ಮೀನು ಮಾರಾಟ**

ಕೆರೆ ಜಲಾಶಯಗಳಲ್ಲಿ ಮೀನು ಉತ್ಪತ್ತಿ ಮಾರಾಟ ಮಾಡುವುದು ವಾಡಿಕೆ. ಉಳಿದ ಮೀನನ್ನು ತಾಲೂಕು ಕೇಂದ್ರಕ್ಕೆ ತಂದು ಮಾರಾಟ ಮಾಡುತ್ತಾರೆ. ಮೊದಲಿಗೆ ಮಾರಾಟ ವ್ಯವಸ್ಥೆ ತುಂಬ ಕಷ್ಟಕರವಾಗಿತ್ತು. ೧೯೫೮-೬೫ರ ವರೆಗೆ ವಿ.ವಿ.ಸಾಗರ, ತುಂಗಭದ್ರ, ಕೆ.ಆರ್.ಸಾಗರ, ಬೆಳಂದೂರು ಕೆರೆಗಳಲ್ಲಿ ೨ಕೆ.ಜಿಗಿಂತ ಹೆಚ್ಚಿನ ತೂಕದ ಕಟ್ಲ, ರೋಹು, ಮೃಗಲ್ ಮೀನುಗಳನ್ನು ಮಂಜುಗಡ್ಡೆಯಲ್ಲಿ ಶೇಖರಿಸಿ ಮರದ ಪೆಟ್ಟಿಗೆಗಳ ಸಹಾಯದಿಂದ ಬೆಂಗಳೂರಿನಿಂದ ಮದ್ರಾಸಿಗೆ ಮದ್ರಾಸಿನಿಂದ ಕಲ್ಕತ್ತಕ್ಕೆ, ಹುಬ್ಬಳಿಯಿಂದ ಕಲ್ಕತ್ತಕ್ಕೆ ಸಾಗಾಣಿಕೆ ಮಾಡುತ್ತಿದ್ದರು. ಇದಕ್ಕೆ ಮಧ್ಯವರ್ತಿಗಳಿ ರುತ್ತಿದ್ದರು. ಬೆಳಂದೂರು ಕೆರೆಗಳಲ್ಲಿ ಇದೇ ಸಮಯದಲ್ಲಿ ಕೋಪಮನಿಂದ ಪ್ರತಿವರ್ಷ ೨೫ರಿಂದ ೪೦ ಮೀನುಗಾರರು ೩ ತಿಂಗಳ ಕಾಲ ಬೀಸು ಬಲೆ ಮತ್ತು ತೆಪ್ಪದ ಸಹಾಯದಿಂದ ೨-೩ ಟನ್ ಮೀನನ್ನು ಹಿಡಿದು ಮಾರಾಟ ಮಾಡುತ್ತಿದ್ದರು. ಮೀನು ಮಾರಾಟ ಮಾಡಲು ಸುಸಜ್ಜಿತ ವ್ಯವಸ್ಥೆಯಿದೆ. ಥ್ರಾನ್ಸ್ಪರ ಮತ್ತು ಕ್ರೈಟ್‌ಗಳು ಟೆಂಪು ಮೂಲಕ ನಗರ ಪ್ರದೇಶಗಳಿಗೆ ರವಾನಿಸಿ ಮಾರಾಟ ಮಾಡಲಾಗುತ್ತಿತ್ತು. ೧೯೫೮ರ ಅವಧಿಯಲ್ಲಿ ಪೌಲಡ್ ಮೀನುಗಳಿಗೆ ೫೦ ಪೈಸೆ ಇದ್ದದ್ದು, ೨೫ರಿಂದ ೭೫ ರೂಪಾಯಿ ಏರಿದೆ. ೪-೫ವರ್ಷಗಳಿಂದ ಆಂಧ್ರಪ್ರದೇಶವಲ್ಲಿ ಓಮೀರಿನಿಂದ ಬೆಳೆದ ಮೀನುಗಳನ್ನು ನಮ್ಮಲ್ಲಿ ಬಂದು ಹೇರಳವಾಗಿ ಮಾರಾಟ ಮಾಡುತ್ತಾರೆ.

**ಮೀನು ಶೇಖರಣ ಸೌಲಭ್ಯ**

೧೯೭೦ರಿಂದೀಚೆಗೆ ಮೀನು ಶೇಖರಣೆಯನ್ನು ಮಂಜುಗಡ್ಡೆಯ ಕಾರ್ಖಾನೆ ಶೀಥಿಲಗ್ರಹದಲ್ಲಿ ಮಾಡುತ್ತಿದ್ದರು. ರಾಜ್ಯ ಹಾಗೂ ಕೇಂದ್ರ ಸರ್ಕಾರದ ಅನುದಾನದಿಂದ ಖಾಸಗಿಯಾಗಿ ಹಲವಾರು ಘಟಕಗಳು ನಿರ್ಮಾಣಗೊಂಡವು. ೧೯೬೬-೬೭ರಲ್ಲಿ ಬೆಂಗಳೂರು, ಮೈಸೂರಿನಲ್ಲಿ ೨ಟನ್ ಬರ್ಫ್ ಕಾರ್ಖಾನೆ, ೫ ಟನ್ ಮೀನು ಹಿಡಿಯುವ ಶೀಥಿಲಿಗ್ರಹ ನಿರ್ಮಿಸಿದೆ. ಟಿಸಿಎಂನ ೨ಸ್ಕೇಲ್ ಇನ್ ಪಾಯಿಂಟ್‌ಗಳು ವಿ.ವಿ.ಸಾಗರ ಮತ್ತು ಮಂಡ್ಯದಲ್ಲಿ ನಿರ್ಮಿಸಿದೆ. ಈಗ ವಿ.ವಿ.ಸಾಗರದಿಂದ ಶಿವಮೊಗ್ಗಕ್ಕೆ ವರ್ಗಾವಣೆ ಹೊಂದಿದೆ. ಕೆಲಸ ಈಗ ನಿಂತಿದೆ. ಖಾಸಗಿಯಾಗಿ ಶೀಥಿಲಿಗ್ರಹಗಳ ನಿರ್ಮಾಣ ಮಾಡಲಾಗಿದೆ. ಇದಕ್ಕೆ ಇಲಾಖೆಯು ಸುಮಾರು ೧೯೭೦-೭೫ರ ವರೆಗೆ ಶೇ.೨೦ಭಾಗ ಧನ ಸಹಾಯ ನೀಡಿದೆ. ಕೈಗಾರಿಕೆ ಇಲಾಖೆಯು ಸಹ ಧನ ಸಹಾಯ ನೀಡಿದೆ. ಸಹಕಾರಿ ಸಂಘಗಳಿಂದ, ಕಾರ್ಪೋರೇಷನ್‌ನಿಂದ ಸಾಲಸೌಲಭ್ಯಗಳು ಸಿಕ್ಕಿವೆ.

ಕರ್ನಾಟಕದ ಮೀನುಗಾರಿಕೆ ಒಂದು ಸಂಕ್ಷಿಪ್ತ ನೋಟವನ್ನು ನೋಡಿದಾಗ ಸಾಂಪ್ರದಾಯಿಕ ದೋಣಿಗಳು ಹಾಗೂ ಬಲೆಗಳ ಉಪಯೋಗ, ಯೋಜನೆಯ ಸಹಕಾರ ಒಳನಾಡಿನ ಮೀನುಗಾರಿಕೆ, ಮೀನುಗಾರರಿಗೆ ಉದ್ಯೋಗಾವಕಾಶ, ಅವರ ಸಾಮಾಜಿಕ, ಆರ್ಥಿಕ ಜೀವನ ಎಲ್ಲವನ್ನು ಅಂದಾಜಿಸಬಹುದು.

## ಅಧ್ಯಾಯ ೪

# ಕರಾವಳಿ ಕರ್ನಾಟಕದ ಮೀನುಗಾರ ಮಹಿಳೆಯರು

ಕರಾವಳಿಯ ಮೀನುಗಾರ ಕುಟುಂಬವೊಂದರಲ್ಲಿ, ವರಮಾನ ಮಟ್ಟವು ಆ ಕುಟುಂಬದ ಮಹಿಳೆಯೊಬ್ಬಳು ಮನೆಯ ಹೊರಗೆ ದುಡಿಮೆ ಮಾಡುವುದರಿಂದ ಉತ್ತಮಗೊಳ್ಳುತ್ತದೆ. ವರಮಾನದ ವರ್ಧನೆಗಾಗಿ ಮಹಿಳೆಯರ ಮನೆಯ ಹೊರಗಿನ ದುಡಿಮೆ ಒಂದು ಸಾಧನ. ಮೀನುಗಾರ ಕುಟುಂಬದಲ್ಲಿ ಗೃಹಿಣಿಯು ಆಕೆಯ ಮಕ್ಕಳ, ಗಂಡನ, ಮತ್ತು ಕುಟುಂಬದ ಔನ್ನತ್ಯದಲ್ಲಿ ಲೀನವಾಗಿ ಹೋಗಬಾರದೆಂಬ ದೃಷ್ಟಿಯಿಂದ ಹೊರಗಿನ ದುಡಿಮೆಗೆ ಆಕೆಯನ್ನು ಪ್ರೋತ್ಸಾಹಿಸುತ್ತಾರೆ. ಮಹಿಳೆಗೆ ಒಂದು ರೀತಿಯ ವ್ಯಕ್ತಿತ್ವವನ್ನು ಆವಳ ಕರ್ತವ್ಯದ ಪಾತ್ರದ ನಿರ್ವಹಣೆಗೆ ಅವಕಾಶವನ್ನು ಮಾಡಿಕೊಡುತ್ತಾರೆ. ಹೀಗೆ ಧಾರಣ ಸಾಮರ್ಥ್ಯ ಸಂಬಂಧಿ ದೃಷ್ಟಿಕೋನವು ನೀಲಿ– ನಿರೂಪಣೆಯ ದೃಷ್ಟಿಯಿಂದ ಹೆಚ್ಚು ಉಪಯುಕ್ತವಾದುದು. ಈ ದೃಷ್ಟಿಯಿಂದ ಮೋಗವೀರ ಮಹಿಳೆಯ_ ಸಮಾನತೆಯನ್ನು ಮೀನು ಮಾರಾಟ ಕ್ಷೇತ್ರದಲ್ಲಿ ನೋಡಬಹುದು.

ಬೆಸ್ತರ ಮಹಿಳೆಯರಿಗೆ ಮೊಗಪಿರ್ತಿ, ಮರಕಾಲ್ತಿ, ಮೊಗೆರ್ತಿ, ಪಟ್ಗಂತ್ತಿ, ಬೋವೆರ್ತಿ, ನಾಯಿತ್ತಿ (ನಾಯಕನ ಮಡದಿ) ಗಂಗಾಮತಸ್ಥೆ, ಅಂಜಿಗೆ ಖಾರ್ವೆತ್ತಿ ಮುಂತಾದ ಹೆಸರಿನಿಂದ ಗುರುತಿಸುತ್ತಾರೆ. ಕೆಲವು ಮೋಗವೀರ ಮಹಿಳೆಯರು ತಮ್ಮ ಪರಂಪರೆಯ ಮೀನು ಮಾರಾಟವನ್ನು ತ್ಯಜಿಸಿ, ಕೃಷಿವೃತ್ತಿ ಗೇರುಬೀಜದ ಕಾರ್ಖಾನೆಗಳಲ್ಲಿ, ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಮಾಡಿಕೊಂಡಿದ್ದಾರೆ. ಮೋಗವೀರ ಮಹಿಳೆಯರು ಪ್ರಾಮಾಣಿಕರು ಮತ್ತು ಧೈರ್ಯವಂತರಾಗಿದ್ದಾರೆ.

**ಉಡುಪಿ ಜಿಲ್ಲೆಯ ಕಡೇಕಾರು ಗ್ರಾಮದ ಮೀನುಗಾರ ಮಹಿಳೆ**

ಉಡುಪಿ ಜಿಲ್ಲೆಯು ಆರ್ಥಿಕ ಚಟುವಟಿಕೆಗಳಲ್ಲಿ ಅದರಲ್ಲಿಯೂ ಮೀನು ಮಾರಾಟ ಕ್ಷೇತ್ರದಲ್ಲಿ ಮಹಿಳೆಯರು ಗಮನಾರ್ಹ ಸ್ಥಾನ ಪಡೆದುಕೊಂಡಿದ್ದಾರೆ. ಈ ಜಿಲ್ಲೆಯು ಪಾರಂಪರಿಕವಾಗಿ ಮೀನುಗಾರಿಕೆಗೆ ಹೆಸರಾಗಿದೆ ಉಡುಪಿ ಬಳಿ ಇರುವ ಮಲ್ಪೆಯಲ್ಲಿ ಆಧುನಿಕ ಯಂತ್ರ ಚಾಲಿತ ಮೀನುಗಾರಿಕೆ ಅಭಿವೃದ್ಧಿಯಾಗಿದೆ.

**ಕಡೇಕಾರು ಗ್ರಾಮ:** ಕಡೇಕಾರು ಗ್ರಾಮವು ಮಲ್ಪೆ ಕರಾವಳಿಯಿಂದ ೩ ಕಿ.ಮೀ ದೂರದಲ್ಲಿದೆ. ಗ್ರಾಮ ಪಂಚಾಯತ್ ವ್ಯಾಪ್ತಿಗೆ ೭ ವಾರ್ಡ್‌ಗಳು ಸೇರುತ್ತವೆ. ಒಂದೊಂದು ವಾರ್ಡ್‌ಗಳಲ್ಲಿ ಸುಮಾರು ೧೦೦ರಿಂದ೧೨೦ ಮಂದಿ ಮೀನುಗಾರ ಮಹಿಳೆಯರು ಮೀನು ಮಾರಾಟ ಮಾಡುವವರಿದ್ದಾರೆ.

**ಕಡೇಕಾರು ಗ್ರಾಮದ ಮೋಗವೀರ ಮಹಿಳೆಯರು;-** ಕಡೇಕಾರು ಗ್ರಾಮದ ಮಹಿಳೆಯರ ಆರ್ಥಿಕ ಜೀವನ ಮೀನುಗಾರಿಕೆಯಿಂದಲೆ ನಡೆಯುತ್ತದೆ. ಈ ಭಾಗದಲ್ಲಿ ತನ್ನ ಎಲ್ಲಾ ಬೇಕು ಬೇಡಗಳನ್ನು ಮಹಿಳೆಯರು ತಾವೇ ಪೂರೈಸಿಕೊಳ್ಳುತ್ತಾರೆ. ಮನೆಯ ನಿರ್ವಹಣೆಯ ಜೊತೆಗೆ ಮನೆಯ ಹೊರಗಿನ ವ್ಯಾಪಾರ ವ್ಯವಹಾರಗಳನ್ನು ಮಾಡಿಕೊಂಡು ಮೂಲಭೂತವಾಗಿ ಮನೆಗೆ ಬೇಕಾದ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ. ಗಂಡಿನ ಸರಿ ಸಮವಾಗಿ ಸ್ವಾವಲಂಭಿಗಳಾಗಿ ನಮ್ಮ ಭಾಗದಲ್ಲಿ ವನಿತೆಯರು ಜೀವನ ನಡೆಸುತ್ತಾರೆ. ಬೆಳಿಗ್ಗೆಯಿಂದ ರಾತ್ರಿವರೆಗೂ ಬಿಡುವಿಲ್ಲದ ಕಾಯಕದಲ್ಲಿ ನಿರಂತರವಾಗಿ ತೊಡಗಿಸಿಕೊಳ್ಳುತ್ತಾರೆ.

ದುಡಿಯುವ ಮಹಿಳೆಯರಿಗೆ ಈ ಭಾಗದಲ್ಲಿ ಪ್ರೋತ್ಸಾಹವಿದೆ. ಸಂಘ-ಸಂಸ್ಥೆಗಳಿಂದ, ಬ್ಯಾಂಕುಗಳಿಂದ ಅನೇಕ ರೀತಿಯ ಸಹಾಯಾಸ್ತಗಳು ಒದಗಿ ಬಂದಿವೆ. ಪ್ರಗತಿಪರ ಚಿಂತನೆಗಳ ಅನೇಕ ಯೋಜನೆಗಳ ಮೂಲಕ ಸಹಾಯ ಸಿಕ್ಕಿದೆ.

ಮೊಗವೀರ ಮಹಿಳೆಯರು ಮೀನು ಮಾರಾಟ ಮಾಡುವುದರಲ್ಲಿ ಪ್ರವೀಣರು. ಅವರ ಮೀನುಗಾರಿಕೆಯ ಚಾತುರ್ಯಕ್ಕೆ ಎಂತಹ ಜಿಪುಣ ಗ್ರಾಹಕನು ವ್ಯಾಪಾರ ಮಾಡಿ ಹೋಗುತ್ತಾನೆ. ಅವರ ಭಾಷಾ ಚಾತುರ್ಯತೆ ಮತ್ತು ಕಾರ್ಯದಕ್ಷತೆ ಮೆಚ್ಚುವಂತದ್ದು. ಮುಖ್ಯ ವಾಹಿನಿಯಲ್ಲಿರುವ ಹೆಚ್ಚಿನ ಸಮುದಾಯಗಳಿಗೆ ಹೋಲಿಸಿದರೆ ಮೀನುಗಾರ ಮಹಿಳೆಯರು ತುಂಬಾ ಅಭಿವೃದ್ಧಿ ಹೊಂದಿದ್ದಾರೆಂದು ಹೇಳಬಹುದು.

೧. **ಮೀನುಗಾರ ಮಹಿಳೆಯರ ಸಾಮಾಜಿಕ ಸ್ಥಿತಿಗತಿ:** ಕಡೇಕಾರು ಗ್ರಾಮದ ಮೊಗವೀರ ಮಹಿಳೆಯರು ನಿತ್ಯಶ್ರಮ ಜೀವಿಗಳಾಗಿದ್ದು, ಅವರ ವೃತ್ತಿಗೆ ಸಂಬಂಧಪಟ್ಟ ಕಾರ್ಯಗಳಲ್ಲೇ ನಿರಂತರವಾಗಿ ತೊಡಗಿಸಿಕೊಳ್ಳುತ್ತಿದ್ದರು. ಮೋಗವೀರ ಸ್ತ್ರೀಯರು ನೇಜಿ ನೆಡುವುದು, ಪೈರು ಕೊಯ್ಯುವುದು, ಭತ್ತ ಕೊಟ್ಟುವುದು ಮುಂತಾದ ಕೆಲಸಗಳನ್ನು ತಿಳಿದವರಾಗಿದ್ದಾರೆ. ಆದರೆ ಈ ಗ್ರಾಮದಲ್ಲಿ ಹೆಚ್ಚಾಗಿ ಅಂಥ ಕೆಲಸಗಳು ಕಂಡುಬರುವುದಿಲ್ಲ. ಏಕೆಂದರೆ ಇವರು ಮೀನು ಮಾರಾಟ, ಮೀನು ಸಂಸ್ಕರಣ ಘಟಕಗಳ ಕಾರ್ಖಾನೆಗಳು ಹಾಗೂ ಮೀನಿನ ವಿಂಗಡಣೆ ಸೇರಿದಂತೆ ಮೀನು ಸಂಬಂಧಿತ ವೃತ್ತಿಯಲ್ಲಿ ನಿರತರಾಗಿದ್ದಾರೆ. ಜಿಲ್ಲೆಯ ಉತ್ತರ ಭಾಗದಲ್ಲಿ ಭತ್ತ ಕುಟ್ಟುವ ಹಾಡುಗಳು ಹೇರಳವಾಗಿದೆ. ಅವಿಭಕ್ತ ಕುಟುಂಬದಲ್ಲಿ ಬದುಕಬೇಕಾದರೆ ಹೆಣ್ಣು ಪ್ರತ್ಯೇಕವಾದ ಸಂಸ್ಕೃತಿಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಅಣ್ಣನ ಹೆಂಡತಿಯಾಗಲಿ, ತಮ್ಮನ ಹೆಂಡತಿಯಾಗಲಿ ಒಂದೇ ಮನೆಯಿಂದ ಬಂದವರಲ್ಲ. ಅವರು ಬೇರೆ ಬೇರೆ ಕುಟುಂಬಗಳಿಂದ ಬಂದವರು. ಆದರೆ ಅವರು ಇಲ್ಲಿ ಅಕ್ಕತಂಗಿಯರ ಹಾಗೇ ಇದ್ದರೆ ಮಾತ್ರ ಆ

ಸಂಸಾರದಲ್ಲಿ ಸುಖವಿರುತ್ತದೆ. ಒಂದು ಅವಿಭಕ್ತ ಕುಟುಂಬದ ಯಜಮಾನಿಯನ್ನು ಅಕ್ಕ ಎಂದು ಕರೆಯುತ್ತಾರೆ. ಮೊಗವೀರ ಹೆಣ್ಣು ಮಕ್ಕಳು ಸೋದರಿಕೆ ಸಂಬಂಧವನ್ನು ಹೆಚ್ಚಾಗಿ ಇಷ್ಟಪಡುವುದಿಲ್ಲ. ಈ ಕಡೇಕಾರು ಗ್ರಾಮದಲ್ಲಿ ಈ ಪದ್ಧತಿ ಸಂಪೂರ್ಣವಾಗಿ ನಿಂತು ಹೋಗಿದೆ.

ಅ. **ಕುಟುಂಬದಲ್ಲಿ ಹೆಣ್ಣಿನ ಸ್ಥಾನಮಾನ:** ಕಡೇಕಾರು ಗ್ರಾಮದ ಸಮಾಜದಲ್ಲಿ ಮಹಿಳೆಯರು ವ್ಯಾಪಾರ, ವ್ಯವಹಾರ ಕ್ಷೇತ್ರದಲ್ಲಿ ಮುಂದುವರಿದಿದ್ದಾರೆ. ಸಾಮಾಜಿಕ ಹಾಗೂ ಕೌಟುಂಬಿಕ ಪರಿಸ್ಥಿತಿ ಎಲ್ಲಾ ಮೊಗವೀರ ಮಹಿಳೆಯರದ್ದು ಒಂದೇ ರೀತಿಯಾಗಿದೆ. ಗಂಡ ಮತ್ತು ಮಕ್ಕಳ ಆಶ್ರಯದಲ್ಲಿ ಪ್ರೀತಿ ವಿಶ್ವಾಸಗಳಿಂದ ಬದುಕುತ್ತಿದ್ದಾರೆ. ಮೊಗವೀರ ಪುರುಷರು ತಮ್ಮ ಸ್ತ್ರೀಯರನ್ನು ಬಲವಾಗಿ ನಂಬುತ್ತಾರೆ. ಗಂಡು ಗತ್ತಿನಿಂದ ತಡ ರಾತ್ರಿಯವರೆಗೂ ಹೆಂಗಸರು ಮನೆಯ ಹೊರಗೆ ದುಡಿಮೆ ಮಾಡುತ್ತಾರೆ. ಅದನ್ನು ಪುರುಷರು ಪ್ರೋತ್ಸಾಹಿಸುತ್ತಾರೆ. ಮಹಿಳೆಯರು ಈ ಭಾಗದಲ್ಲಿ ತಮ್ಮ ದುಡಿಮೆಯ ಮೂಲಕ ಆರ್ಥಿಕ ಭದ್ರತೆ, ಸಾಮಾಜಿಕ ಭದ್ರತೆ, ಕೌಟುಂಬಿಕ ಭದ್ರತೆಯನ್ನು ಯೋಗ್ಯ ರೀತಿಯಲ್ಲಿ ನಿರ್ವಹಣೆ ಮಾಡುತ್ತಾರೆ. ನಿಜವಾಗಿಯೂ ಕಡೇಕಾರು ಗ್ರಾಮದ ಸ್ತ್ರೀಯರು ಉತ್ತಮ ರೀತಿಯಲ್ಲಿ ಕುಟುಂಬದ ನಿರ್ವಹಣೆ ಮಾಡುತ್ತಾರೆ. ಅದನ್ನು ಪುರುಷರು ಒಪ್ಪಿಕೊಂಡಿದ್ದಾರೆ. ಈ ಭಾಗದ ಮನೆಯ ವಡತಿಯನ್ನು ಯಜಮಾನತಿ ಅಥವಾ ಅಕ್ಕ ಎಂದು ಕರೆಯುತ್ತಾರೆ. ಇವಳು ಮನೆಯ ಹಿರಿಯವಳಾಗಿ ತನ್ನ ಸಂಸಾರವನ್ನು ಮುನ್ನಡೆಸಿಕೊಂಡು ಹೋಗುತ್ತಾಳೆ.

ಆ. **ಸಮಾಜದಲ್ಲಿ ಹೆಣ್ಣಿನ ಪಾತ್ರ:** ಕಡೇಕಾರು ಗ್ರಾಮದ ಮೊಗವೀರ ಮಹಿಳೆಯರು ಕೆಲವೊಂದು ಸಂಘ-ಸಂಸ್ಥೆಗಳಲ್ಲಿ ಭಾಗವಹಿಸಿಕೊಂಡು ಶಿಕ್ಷಣ ವಲಯ ಧಾರ್ಮಿಕ ವಲಯ, ರಾಜಕೀಯ ವಲಯ, ಸಾಮಾಜಿಕ ವಲಯಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾಳೆ. ಅನೇಕ ಸಾಮಾಜಿಕ ಕಾರ್ಯಕ್ರಮಗಳಾದ ರಕ್ತದಾನ ಶಿಬಿರ, ಆರೋಗ್ಯ ಶಿಬಿರ ಮೊದಲಾದವುಗಳಲ್ಲಿ ಪಾಲ್ಗೊಳ್ಳುತ್ತಿದ್ದಾಳೆ. ಕಡೇಕಾರು ವನಿತೆಯರು ಬಿಡುವಿಲ್ಲದ ವೃತ್ತಿಯಲ್ಲಿ ತೊಡಗಿಸಿಕೊಂಡರು ಕೂಡ ಶ್ರಮಧಾನಗಳಲ್ಲಿ ಸಾಮಾಜಿಕ ಸಭೆಗಳಲ್ಲಿ, ದೇವಸ್ಥಾನಗಳಲ್ಲಿ, ಹಬ್ಬಹರಿದಿನ, ಜಾತ್ರೆಗಳಲ್ಲಿ ಉಚಿತವಾಗಿ ಸ್ವಯಂ ಪ್ರೇರಿತ ಸೇವೆಯನ್ನು ನೀಡುತ್ತಿದ್ದಾರೆ. ಮೊಗವೀರ ಮಹನೀಯರು ಸ್ತ್ರೀಯರಿಗೆ ವಿಶೇಷವಾದ ಸಹಕಾರ ನೀಡುವುದರಿಂದ ಆಕೆಗೆ ಸಮಾಜದಲ್ಲಿ ಎಲ್ಲಾ ಕ್ಷೇತ್ರದಲ್ಲಿ ಗೌರವ ಸಿಗುತ್ತಿದೆ. ಮಹಿಳೆಯರ ದಕ್ಷ ಆಡಳಿತದಿಂದ ಈ ಭಾಗದಲ್ಲಿ ಶೈಕ್ಷಣಿಕವಾಗಿ ಮುಂದುವರಿದಿರುವುದನ್ನು ನಾವು ನೋಡಬಹುದಾಗಿದೆ. ನಾವು ಗಮನದಲ್ಲಿಟ್ಟುಕೊಳ್ಳಬೇಕಾದ ಅಂಶಗಳೆಂದರೆ ಈ ಭಾಗದಲ್ಲಿ ವಿದ್ಯಾಭ್ಯಾಸದ ಮಟ್ಟವು ಅಧಿಕವಾಗಿರುತ್ತದೆ. ಉನ್ನತ ಮಟ್ಟದ ಶಿಕ್ಷಣವು ಇಲ್ಲಿರುವುದು ಕಂಡುಬರುತ್ತದೆ. ಕಡೇಕಾರು ಗ್ರಾಮದಲ್ಲಿ ಹೆಣ್ಣು ಗಂಡು ಭೇದವಿಲ್ಲದೆ ಸಮಾನ ದೃಷ್ಟಿಕೋನದಿಂದ ಕೆಲಸ ನಿರ್ವಹಿಸುತ್ತಾರೆ.

**ಜೀವನಾವರ್ತನ ಆಚರಣೆಗಳಲ್ಲಿ ಮಹಿಳೆಯರ ಪಾತ್ರ**

ಕಡೇಕಾರು ಗ್ರಾಮದ ಮೊಗವೀರರಲ್ಲಿ ಹುಟ್ಟಿನಿಂದ ಸಾವಿನವರೆಗೂ ನಡೆಯುವ ಎಲ್ಲಾ ಆಚರಣೆಗಳಲ್ಲಿ ಸ್ತ್ರೀಯರೇ ಕೇಂದ್ರ ಬಿಂದುವಾಗಿರುತ್ತಾರೆ. ಅವರಿಗೆ ವಿಶೇಷವಾಗಿ ಸ್ಥಾನಮಾನಗಳನ್ನು ನೀಡಲಾಗಿದೆ. ಬಾಣಂತಿಯರನ್ನು ವಿಶೇಷವಾದ ಕಾಳಜಿಯಿಂದ ನೋಡಿಕೊಳ್ಳುತ್ತಿರುವುದು, ಮಗು ಹೆತ್ತ ನಂತರ ಯಾವ ಮಡಿ ಮೈಲಿಗೆಗಳಿಲ್ಲದೆ ಒಳಗೆ ಸೇರಿಸಿಕೊಳ್ಳುತ್ತಾರೆ. ಜೊತೆಗೆ ಉತ್ತಮವಾದ ಆರೈಕೆ ಮಾಡುತ್ತಾರೆ. ಋತುಮತಿಯಾದಾಗ ಹೆಣ್ಣು ಮಕ್ಕಳಿಗೆ ಪೌಷ್ಟಿಕ ಆಹಾರ ನೀಡಿ ಉತ್ತಮವಾಗಿ ಪೋಷಿಸುತ್ತಾರೆ. ಸ್ವಲ್ಪಮಟ್ಟಿಗೆ ಋತುವಾದ ಸಂದರ್ಭದಲ್ಲಿ ಮುಟ್ಟಿಸಿಕೊಳ್ಳುವುದಿಲ್ಲ. ಉಳಿದಂತೆ ಮೊಗವೀರ ಸ್ತ್ರೀಯರಿಗೆ ಎಂದಿನಂತೆ ಗೌರವಿರುತ್ತದೆ. ಮೋಗವೀರರ ಕುಲಕಸುಬು ಕೂಡ  ಸ್ತ್ರೀ ಮೂಲಕವೇ ಆಗಿದೆ. ಕಡಲನ್ನು ಗಂಗೆಯೆಂದು ಹೆಣ್ಣಿನ ಹೆಸರಿನಿಂದಲೇ ಕರೆಯುವ  ಅವರ ಜೀವನ ವರ್ತನ ಆಚರಣೆಗಳು ನಡೆಯುತ್ತವೆ. ಅವರು ಹಿಡಿಯುವ ಮೀನನ್ನು ಕೂಡ ಸ್ತ್ರೀ ರೂಪದಲ್ಲಿಯೇ ಪೂಜಿಸುತ್ತಾರೆ. ಮೊಗವೀರರ ಕುಲದೇವರು ಸಹ ಹೆಣ್ಣೆ ಆಗಿದೆ.

**ಹುಟ್ಟು:** ಕಡೇಕಾರು ಗ್ರಾಮದಲ್ಲಿ ಮಗು ಹುಟ್ಟಿದಾಗ ೭ ದಿವಸಗಳ ನಂತರ ನಾಮಕರಣ ಮಾಡುತ್ತಾರೆ. ಕೆಲವರು ೧೧ ದಿನಕ್ಕೂ ಮಾಡುವುದುಂಟು. ಆ ದಿನ ಎಕ್ಕೆ ಗಿಡದ ನಾರು ತೆಗೆದು ಮಗುವಿಗೆ ಉಡಿದಾರ ಕಟ್ಟುತ್ತಾರೆ. ಹನ್ನೊಂದನೆ ದಿನ ಆಮೆ ಶುದ್ಧವಾಗುತ್ತದೆ. ಕೆಲವರು ೧೩ ದಿನಕ್ಕೂ ಮಾಡುತ್ತಾರೆ. 'ಬಿಜ್ಜಂತಿ' ಅಥವಾ 'ಬಿಜ್ಜಲತಿ'(ಸೂಲಗಿತ್ತಿ)ಯೇ ಬಂದು ಸ್ನಾನ ಮಾಡಿಸಬೇಕು. ಆ ನಂತರ ಆಮೆ ಹೊಂಡದ ಒಳ ಬಂದು ದೀಪ ಉರಿಸಿ, ಐದು ದೋಸೆಯನ್ನು ತಂದು ಆ ಹೊಂಡಕ್ಕೆ ಹಾಕುತ್ತಾರೆ. ಅನಂತರ ಹೊಂಡವನ್ನು ಮುಚ್ಚಿ ಅದರಲ್ಲಿ ಬಾಳೆ ಗಿಡವೋ ಬಸಳೇ ಗಿಡವೋ ನೆಡುತ್ತಾರೆ. ನಂತರ ಮಗುವಿನ ನಾಮಕರಣ ಮಾಡುತ್ತಾರೆ. ಶುಭ ಸಂಕೇತವಾಗಿ ಸಿಹಿಯನ್ನು ವಿತರಿಸುತ್ತಾರೆ. ಕೊನೆಯಲ್ಲಿ ಹಬ್ಬದ ಅಡುಗೆ ಮಾಡಿ ಊಟ ಮಾಡುತ್ತಾರೆ. ಮಗುವಿಗೆ ಶುಭವಾಗಲಿ ಎಂದು ಹರಸಿ ಮುಯಿ ಹಾಕುತ್ತಾರೆ.

**ಋತುಮತಿ:** ಕಡೇಕಾರು ಗ್ರಾಮದಲ್ಲಿ ಹೆಣ್ಣುಮಕ್ಕಳು ಮೊದಲನೇ ಬಾರಿ ಮೈ ನೆರೆದಾಗ ತುಳು ಸಂಪ್ರದಾಯದಂತೆ ಕೆಲವೊಂದು ಆಚರಣೆಗಳನ್ನು ಮಾಡುತ್ತಾರೆ. ಬೇರೆ ಬೇರೆ ಬೆಡಗುಗಳ ಮೂರು ಅಥವಾ ಐದು ಮಂದಿ ಹೆಂಗಸರನ್ನು ಮನೆಗೆ ಆಮಂತ್ರಿಸಬೇಕು. ಸಿಪ್ಪೆ ತೆಗೆದ ಏಳು ತೆಂಗಿನಕಾಯಿಗಳನ್ನು ನೆಲದಲ್ಲಿ ಹರಡಿ ಅದರ ಮೇಲೆ ಆಕೆಯನ್ನು ಕೂರಿಸಬೇಕು. ಸುತ್ತಲೂ ನಾಲ್ಕು ಮಣ್ಣಿನ ಪಾತ್ರೆಗಳಲ್ಲಿ ಕಲಶದ ನೀರು ತುಂಬಿಸಿಡಬೇಕು. ಬಂದ ಮುತ್ತೈದೆಯರು ಆಕೆಯ ತಲೆಗೆ ಅಕ್ಕಿಕಾಳು ಹಾಕಿ ಆ ಕಲಶಗಳಲ್ಲಿರುವ ನೀರನ್ನು ಎರೆಯುತ್ತಾರೆ. ಆ ನಂತರ ಆಕೆ ಸ್ನಾನ ಮಾಡಿಕೊಂಡು ಶುಚಿಯಾದ ಹೊಸಬಟ್ಟೆ ತೊಟ್ಟು ಬರುತ್ತಾಳೆ. ಆಕೆಗೆ ಮದುಮಗಳ ಹಾಗೆ ಶೃಂಗಾರ ಮಾಡಿ ಮಂಗಳರಾತಿ ಬೆಳಗಿ ಎಲ್ಲರೂ ಆಶೀರ್ವಾದ ಉಡುಗೊರೆಯನ್ನು ನೀಡುತ್ತಾರೆ. ಅನ್ನಕ್ಕೆ ತೆಂಗಿನಕಾಯಿ ಪೆರೆದು ಮಿಶ್ರಣ ಮಾಡಿ ಎಲ್ಲರೂ ಊಟ ಮಾಡುವುದು ಸಂಪ್ರದಾಯವಾಗಿದೆ. ಇದರೊಂದಿಗೆ ಜಮಾ, ಸಾಸಿವೆ, ಮೆಂತೆ, ಜೀರಿಗೆ, ಕಾಳು ಮೆಣಸು ಮತ್ತು ವಾಲೇ ಬೆಲ್ಲ ಇವಿಷ್ಟನ್ನು ಸ್ವಲ್ಪ ನೀರು ಸೇರಿಸಿ ಚೆನ್ನಾಗಿ ರುಬ್ಬಿ, ಒಂದಿಷ್ಟು

ತುಪ್ಪವನ್ನು ಹಾಕಿ, ಆ ಪಾನೀಯವನ್ನು ಆಕೆಗೆ ಕುಡಿಸಬೇಕು. ಹೀಗೆ ಹದಿಮೂರು ದಿನಗಳ ಕಾಲ ಔಷಧಿಯಂತೆ ಪಾನೀಯವನ್ನು ಸೇವಿಸಬೇಕು.

**ಹುಗ್ಗಿ ಊಟ:** ಬೆಳ್ಳಿಗೆ ಅಕ್ಕಿಯ ಅನ್ನಕ್ಕೆ ಸ್ವಲ್ಪ ಬೆಲ್ಲ ತೆಂಗಿನಕಾಯಿ ಸೇರಿಸಿ ಅದನ್ನು ಊಟದ ವೇಳೆ ಅವಳಿಗೂ, ಬಂದವರಿಗೂ ಬಡಿಸುತ್ತಾರೆ. ಇದಕ್ಕೆ ಹುಗ್ಗಿ ಊಟವೆಂದು ಕರೆಯುತ್ತಾರೆ. ಹುಡುಗಿಗೆ ಮದುವೆಯಾಗಿದ್ದು, ಆಕೆ ಗಂಡನ ಮನೆಯಲ್ಲೇ ಮೈನೆರೆದರೆ ಈ ಸಮಾರಂಭ ಮುಗಿದ ಬಳಿಕ ಆಕೆಯನ್ನು ತವರು ಮನೆಗೆ ಕರೆದುಕೊಂಡು ಹೋಗುತ್ತಾರೆ. ಮದುವೆಯಾಗುವ ಮುನ್ನ ತಾಯಿ ಮನೆಯಲ್ಲೇ ಮೈನೆರೆದರೆ ತಂದೆಯ ಕಡೆಯ ಸಂಬಂಧಿಕರು ಅಥವಾ ಸಮೀಪದ ಬೇರೆ ಯಾರಾದರೂ ಬಂಧುಗಳು ಕರೆದುಕೊಂಡು ಹೋಗುತ್ತಾರೆ. ಅಂತೂ ಆ ರಾತ್ರಿ ಆಕೆ ಋತುವಾದ ಮನೆಯಲ್ಲಿ ಇರಬಾರದು.

**ಹುಡುಗಿ ನೋಡುವುದು(ಕನ್ಯೆ ನೋಡುವುದು):** ತುಳುನಾಡಿನ ಅತೀ ಪ್ರಾಚೀನ ಜನಾಂಗವಾದ ಮೊಗವೀರರು ವಂಶಾನುಕ್ರಮವಾಗಿ ಹೆಣ್ಣು ನೋಡುವ ಮೊದಲು ಬಳಿ ಅಥವಾ ಬೆಡಗುಗಳನ್ನು ನೋಡುತ್ತಾರೆ. ಕಡೇಕಾರು ಗ್ರಾಮದ ಮೊಗವೀರರಲ್ಲಿಯೂ ಇದೇ ರೀತಿ ಇರುತ್ತದೆ. ಬಳಿಯನ್ನು ಗೋತ್ರ ಎನ್ನುತ್ತೇವೆ. ತುಳುವರು ಇದನ್ನು 'ಬರಿ' ಎನ್ನುತ್ತಾರೆ. ವಿವಾಹಾದಿ ಸಂದರ್ಭಗಳಲ್ಲಿ ನಂಟಸ್ತಿಕೆಯನ್ನು ನಿಶ್ಚಯಿಸುವಾಗ, ವಧುವರರ ಗೋತ್ರ ಮುಖ್ಯವಾಗಿರುತ್ತದೆ. ಮೊಗವೀರರಲ್ಲಿ ಸ್ವಗೋತ್ರ ವಿವಾಹ ನಿಷೇದವಾಗಿದೆ. ತುಳುನಾಡಿನಲ್ಲಿ ಮುಖ್ಯವಾಗಿದ್ದ ಅಮ್ಮಣ್ಣಾಯ, ಕಂಚನಾಯ, ಕರ್ಬುರನ್ನಾಯ, ಕುಂದನ್ನಾಯ, ಕೋದ್ಯನ್ನಾಯ, ಮೈಂದಣ್ಣಾಯ, ಸಾಲೆನ್ನಾಯ, ಸಿರಿಯನ್ನಾಯ ಎಂಬ ಬಳಿಗಳಿವೆ. ಹುಡುಗಿಯ ಮನೆಗೆ ಗಂಡು ಅಥವಾ ಗಂಡಿನ ಕಡೆಯವರು ಹುಡುಗಿಯನ್ನು ನೋಡಿಕೊಂಡು ಇಷ್ಟವಾದರೆ ಅಲ್ಲಿಯೇ ಊಟ ಮಾಡುತ್ತಾರೆ. ಇಲ್ಲವಾದರೆ ಮನೆಗೆ ಹೋಗಿ ಹೇಳುತ್ತೇವೆ ಎಂದು ಸೂಚನೆ ನೀಡಿ ಬರುವುದು ವಾಡಿಕೆಯಾದರೆ ಈಗ ಈ ಪದ್ಧತಿ ಇಲ್ಲಿ ದೇವಸ್ಥಾನ ಅಥವಾ ಇನ್ನಿತರ ಸಮಾರಂಭ ಮದುವೆಗಳಲ್ಲಿ ಮೊದಲೆ ನೋಡಿಕೊಳ್ಳುತ್ತಾರೆ. ನಂತರ ಮನೆಗೆ ಬರುತ್ತಾರೆ.

**ನಿಶ್ಚಿತಾರ್ಥ:** ವರನ ಕಡೆಯವರು ಮತ್ತು ಗುರಿಕಾರರು ನೆಂಟಸ್ತಿಕೆ ಮಾತನಾಡಲು ಹುಡುಗಿ ಮನೆಗೆ ಹೋಗುತ್ತಾರೆ. ನೆಂಟಸ್ತಿಕೆ ಆಗಬಹುದು ಎಂದಾದರೆ ಎರಡು ಕಡೆಯವರು ಸೇರಿ ಮುಂದೊಂದು ದಿನ ನಿಶ್ಚಯ ಮಾಡಿ ಗ್ರಾಮ ದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿ 'ಪ್ರಸಾದ ಶಾಸ್ತ್ರ' ನಡೆಯುತ್ತದೆ. ದೇವರಿಗೆ ಮಂಗಳಾರತಿಯಾಗುವಾಗ ಪ್ರಸಾದ ಹೂಗಳು ಕೆಳಗೆ ಉದುರಿದರೆ ಆ ಮದುವೆಗೆ ದೇವರ ಅಪ್ಪಣೆ ಉಂಟೆಂದು ಅರ್ಥ. ನಾಲ್ಕೈದು ಆರತಿ ಆಗುವವರೆಗೂ ಪ್ರಸಾದ ಹೂ ಉದುರದಿದ್ದರೆ ದೇವರ ಒಪ್ಪಿಗೆ ಇಲ್ಲವೆಂದು ಅರ್ಥ. ಅಂಥ ಸಂದರ್ಭದಲ್ಲಿ ಈ ನೆಂಟಸ್ತಿಕೆಯನ್ನು ಕೈ ಬಿಡಲಾಗುವುದು. ಮುಂದಿನದು ನಂಜಿಗೆ ರಾತ್ರಿ .ಗಂಡಿನ ಕಡೆಯವರು ತಮ್ಮ ಗುರಿಕಾರನನ್ನು ಕರಕೊಂಡು ಹೆಣ್ಣಿನ ಮನೆಗೆ ಹೋಗುತ್ತಾರೆ.

ಅಲ್ಲಿ ಮದುವೆಯ ನಿಶ್ಚಿತಾರ್ಥ ಅಥವಾ ನಂಬಿಕೆ ಶಾಸ್ತ್ರ ಜರುಗುತ್ತದೆ. ಹೆಣ್ಣಿನ ಕಡೆಯ ಗುರಿಕಾರನು ವರನ ಹೆಸರು ಹೇಳಿ(ಉದಾ: ರಾಮ ಎಂದಿದ್ದರೆ) "ರಾಮ ಎಂಬ ಹೆಸರಿನ ಹುಡುಗನೇ ನಮ್ದು"ಎಂದು ಮೂರು ಸಲ ಹೇಳಿ ಗಂಡಿನ ಕಡೆಯ ಗುರಿಕಾರನ ಕೈ ಮುಟ್ಟುತ್ತಾನೆ. ಆನಂತರ ಹೆಣ್ಣಿನ ಕಡೆಯ ಗುರಿಕಾರರು ಅದೇ ರೀತಿ ಮಾಡುತ್ತಾರೆ. ಎರಡು ಕಡೆಯವರು ತುಳಸಿಕಟ್ಟೆಯಲ್ಲಿ 'ದೇವರ ವೀಳ್ಯೆ'ವನ್ನಿಡುತ್ತಾರೆ. ಆನಂತರ ಬಂದ ಮುಖ್ಯಸ್ಥರಿಗೆಲ್ಲ ವೀಳ್ಯ ಪಟ್ಟ ಕೊಡುತ್ತಾರೆ. ಮುಂದಿನ ಕಾರ್ಯಕ್ರಮ ನಂಬಿಕೆ ಸೀರೆ ಉಡಿಸುವುದು. ಮುತ್ತೈದೆಯರು ವಧುವಿಗೆ ಹೊಸ ಸೀರೆ ಉಡಿಸುತ್ತಾರೆ.

ಕಡೇಕಾರು ಗ್ರಾಮದಲ್ಲಿ ತುಳುನಾಡಿನ ಸಂಪ್ರದಾಯದಂತೆ ನಿಶ್ಚಿತಾರ್ಥಕ್ಕೆ ಮೊದಲು ಗುರಿಕಾರರು 'ಬರಿ ಬಂಡೊ ಪರಿ ವುಂಡೆ' ಒಪರಿತ್ತಪುದರ್ ಪರಿವುಂಡಾ ಎಂದು ಹೇಳಿ ಪರಸ್ಪರ ವಿಚಾರಿಸುತ್ತಾರೆ. ನೆಂಟಸ್ತಿಕೆಯನ್ನು ನಿಶ್ಚಯ ಮಾಡುತ್ತಾರೆ. ಕೊನೆಯಲ್ಲಿ ತಮೇರ್ಶಕುಲು ಕುಟುಂಬದ ಹಿರಿಯರು 'ಕಾಯಿಪಗರ್ಪುನದು' ಎಂಬ ಕಾರ್ಯಕ್ರಮ ಮಾಡುತ್ತಾರೆ. ಎರಡೂ ಕಡೆಯವರೂ ವೀಳ್ಯದೆಲೆ ಅಡಿಕೆಗಳನನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಮದುವೆಯ ದಿನವೂ 'ಕಾಯಿಪುಗರ್ಪುನು' ಕಾರ್ಯಕ್ರಮವನ್ನು ನಡೆಸುವ ಪದ್ಧತಿ ಇದೆ. ಹೆಣ್ಣಿನ ಕಡೆಯಲಿ ವರದಕ್ಷಿಣೆಯ ಸ್ವಲ್ಪ ಭಾಗವನ್ನು ಈ ಸಭೆಯಲ್ಲಿಯೇ ಆಪ್ತವಾಗಿ ನೀಡಬೇಕು(ಮೊದಲೇ ಒಪ್ಪಂದ ಮಾಡಿಕೊಳ್ಳುತ್ತಾರೆ).

**ಮದುವೆ**: ಕಡೇಕಾರು ಗ್ರಾಮದ ಮೊಗವೀರ ಮದುವೆಗಳು ಮೊದಲಿನ ಕಾಲದಲ್ಲಿ ವರನ ಮನೆಯಲ್ಲಿ ಜರುಗುತ್ತಿದ್ದವು. ಅಲ್ಲಿಗೆ ಹೆಣ್ಣಿನ ಕಡೆಯವರು ದಿಬ್ಬಣ ಬರಬೇಕು. ದಿಬ್ಬಣ ತೋರಣದ ಬಳಿ ಬಂದೊಡನೆ ವರನ ಮನೆಯ ಹೆಂಗಸರು ವಧುವಿನ ಹಣೆಗೆ ಕುಂಕುಮ ಹಚ್ಚಿ ತಲೆಗೆ ಹೂ ಮುಡಿಸುತ್ತಾರೆ. ದಿಬ್ಬಣಿಗರೆಲ್ಲ ಒಳಗೆ ಬಂದು ಕೂತ ಬಳಿಕ ಎರಡು ಕಡೆಯವರೂ ಬಾಳೆಲೆಯಲ್ಲಿ ವೀಳ್ಯದೆಲೆ ಅಡಿಕೆ ಸಿದ್ಧಪಡಿಸಿಕೊಂಡು ಪರಸ್ಪರ ಬರಿ(ಗೋತ್ರ) ಕೇಳುತ್ತಾರೆ. ಆನಂತರ ವಧುವಿನ ಕಡೆಯವರು 'ಎಂಕ್ಲೆನ ಪೊಣ್ಣ್ ಸಂದ್'ಂಡ್'ಎಂದೂ ಮೂರು ಬಾರಿ ಹೇಳಿ ಇನ್ನೊಮ್ಮೆ ವಿವಾಹ ನಿಶ್ಚಯವನ್ನು ಖಾತ್ರಿಗೊಳಿಸುತ್ತಾರೆ ಹಾಗೂ ವೀಳ್ಯದೆಲೆ ಅಡಿಕೆಯನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ. ಈಗ ಆಧುನಿಕವಾಗಿ ಚಿನ್ನದ ಉಂಗುರ ವಿನಿಮಯ ಮಾಡಿಕೊಳ್ಳುವುದುಂಟು.

**ತಮೇರ್‌ತಿಪ್ಪನು:** ವಧುವಿನ ಕಡೆಯವರು ಅಣಪಾಲ್‌ದ ತಮೇರ್‌ಬಲೆ(ಗಂಡಿನ ಕಡೆಯ ವಾರಸುದಾರರು ಬನ್ನಿ) ಎಂದು ಕರೆಯಿಸಿ ಅವರಿಗೆ ಗೌರವಧನ(ವರದಕ್ಷಿಣೆ) ಸಲ್ಲಿಸುತ್ತಾರೆ. ಹಾಗೆಯೇ ವರನ ಕಡೆಯವರು ವಧುವಿಗೆ ಅವರೇ ತಂದ ಹೊಸ ಸೀರೆ ಅಂದರೆ ಧಾರೆ ಸೀರೆಯನ್ನು ನೀಡುತ್ತಾರೆ. ಅದಕ್ಕೆ ರವಿಕೆಯನ್ನು ಮೊದಲೆ ಹೊಲಿಸಿ ತಂದಿರುತ್ತಾರೆ. ಅದನ್ನು ಅವರೇ ಉಡಿಸುತ್ತಾರೆ. ತಲೆ ಬಾಚಿ ಹೂ ಮುಡಿಸಿ ಕರೆತರುತ್ತಾರೆ.

**ಧಾರೆ:** ಚಪ್ಪರದಲ್ಲಿ ವಧು-ವರರಿಗೆ ಕುಳಿತುಕೊಳ್ಳಲು ಎರಡು ಆಸನಗಳನನ್ನಿಟ್ಟಿರುತ್ತಾರೆ. ಅದರ ಸುತ್ತಲೂ ನಡೆಯಲು ನೆಲದ ಮೇಲೆ ಚಾವಡೆ(ಮಡಿವಸ್ತ್ರ) ಹಾಕಿರುತ್ತಾರೆ. ಆಸನಗಳಿಗೂ ಮಡಿವಸ್ತ್ರ ಹೊದಿಸಿರುತ್ತಾರೆ. ವರನ ಭಾವ ವರನ ಕೈ ಹಿಡಿದು, ವಧುವಿನ ಅತ್ತಿಗೆ ನಾದಿನಿಯರು ವಧುವಿನ ಕೈ ಹಿಡಿದು ಧಾರೆ ಮಂಟಪಕ್ಕೆ ಮೂರು ಸುತ್ತು ಬರಿಸುತ್ತಾರೆ. ಬಳಿಕೆ ವಧುವು ವರನಿಗೂ, ವರನು ವಧುವಿಗೂ ಪರಸ್ಪರ ಮಾಲೆ ಹಾಕಿಕೊಳ್ಳುತ್ತಾರೆ.

**ಮುಂದಿನದು ಧಾರೆ:** ಕಡೇಕಾರು ಗ್ರಾಮದಲ್ಲಿ ಜರುಗುವ ಸಂಪ್ರದಾಯಿಕ ಮಾತುಕತೆಗಳು ಎಂದರೆ ಗುರಿಕಾರು 'ಸಭೆ ಸರ್ವೇರೆಟ ಮದ್ಮಾಯೆ ಮದ್ಮಾಳೆನ ಕೈ ಜೋಡ್ಸುವೊ ಪನ್ಪೆರೆ' ಆಗ ಸಭೆಯವರು ಎಡ್ಡೆ ಪನ್ಪೆರೆ ಎನ್ನುತ್ತಾರೆ. ವರನ ಕೈಯನ್ನು ವಧುವಿಗೆ 'ದಾರೆಗ್ ಕಾಯಿ ದೀಪೊ ಪನ್ಪೆರ್' ಸಭೆಯವರು ಎಡ್ಡೆ ಪನ್ಪೆರ್ ಎನ್ನುತ್ತಾರೆ. ಗುರಿಕಾರರು 'ಪಿಂಗಾರ ಪರಿಪೊಡಾರೆ ಮಯಿಪ್ಪವೋ ಪನ್ಪೆರ್ ಸಭೆಯವರು ಎಡ್ಡೆ ಪನ್ಪೆರ್ ಎನ್ನುತ್ತಾರೆ.

ವಧುವಿನ ತಂದೆ ಅಥವಾ ಸೋದರ ಮಾವ ಧಾರೆ ಹೊಯ್ಯುತ್ತಾರೆ. ಕಲಶ ಪಾತ್ರೆಯಲ್ಲಿ ಹಾಲು ತುಂಬಿಸಿ, ಅದನ್ನೇ ಧಾರೆಯಾಗಿ ಎರೆಯುತ್ತಾರೆ. ಆನಂತರ ತೇಸೆ ಹಾಕುವ ಕಾರ್ಯಕ್ರಮದಲ್ಲಿ ಸಭಿಕರೆಲ್ಲ ಊಟ ಮಾಡುತ್ತಾರೆ. ಊಟದ ಸಂದರ್ಭದಲ್ಲಿ ತಟ್ಟುಗ ಪತ್ತಾವುನಿ(ಸಟ್ಟುಗ ಕೊಡುವುದು) ಎಂಬೊಂದು ಸಂಪ್ರದಾಯವಿದೆ. ವಧುವಿನ ಕೈಯಲ್ಲಿ ಸೌಟು ಕೊಟ್ಟು ವರನಿಗೆ ಬಡಿಸಲು ಹೇಳುತ್ತಾರೆ.

**ಬಯಕೆ ಮದುವೆ:** ಕಡೇಕಾರು ಗ್ರಾಮದಲ್ಲಿ ಬಸುರಿಯಾದ ಮಗಳನ್ನು ಚೊಚ್ಚಲ ಹೆರಿಗೆ ಸಮೀಪವಿರುವ ದಿನವನ್ನು ಆಯ್ಕೆ ಮಾಡಿ ತವರು ಮನೆಗೆ ಕರಕೊಂಡು ಹೋಗಿ ಅಲ್ಲಿ 'ಬಯಕೆ' ಮದುವೆ ನಡೆಸುತ್ತಾರೆ. ಬಯಕೆ ಮದುವೆಗೆ ಯಾವುದಾದರೂ ಐದು ಬಗೆಯ ಭಕ್ಷ್ಯ ತಯಾರಿಸಲೇಬೇಕೆಂಬ ಸಂಪ್ರದಾಯವಿದೆ. ಆ ದಿನ ಬಸಳೆ ಪಲ್ಯ ಅಥವಾ ನುಗ್ಗೆ ಸೊಪ್ಪಿನ ಪಲ್ಯ ಮತ್ತು ಕೋಳಿ ಮೊಟ್ಟೆ ಅಗತ್ಯವಾಗಿ ಬೇಕು. ಭಕ್ಷ್ಯಗಳನ್ನೆಲ್ಲಾ ಬಳಸಿದ ನಂತರ ಅದರಿಂದ ಸ್ವಲ್ಪ ತೆಗೆದು ಗರ್ಭಿಣಿಯ ಬಾಯಿಗೆ ಮುಟ್ಟಿಸಿ. ಆ ನಂತರ ಒಂದು ಗಂಡು ಮಗುವಿಗೂ, ಹೆಣ್ಣು ಮಗುವಿಗೂ ತಿನ್ನಲು ಕೊಡಬೇಕು. ಬಳಿಕ ಸ್ವಲ್ಪ ಕಜ್ಜಾಯವನ್ನು ಒಂದು ಪೆಟ್ಟಿಗೆ ಒಳಗೆ ಇಟ್ಟು ಅದಕ್ಕೆ ಧಾರೆ ಸೀರೆಯನ್ನು ಮುಟ್ಟಿಸಿ ತುಳಿಸಿಕಟ್ಟೆಯ ಬಳಿ ಪ್ರತ್ಯೇಕವಾಗಿ ತೆಗೆದಿಡುತ್ತಾರೆ. ಬಳಿಕ ಎಲ್ಲರೂ ಊಟ ಮಾಡುತ್ತಾರೆ. ಆ ಪಿಠಾರಿಯನ್ನು ಆಕೆಯ ಗಂಡನ ಮನೆಗೆ ಕೊಂಡು ಹೋಗುವ ಜವಾಬ್ದಾರಿ ಆಕೆಯ ಅಣ್ಣ ಅಥವಾ ತಮ್ಮನದು.

**ಅಂತ್ಯಕ್ರಿಯೆ:** ವ್ಯಕ್ತಿಯು ಸತ್ತ ಕೂಡಲೇ ತಲೆ ಮತ್ತು ಕಾಲುಗಳ ಹತ್ತಿರ ತೆಂಗಿನ ಕಾಯಿ ಕಡಿಗಳಲ್ಲಿ ಎಣ್ಣೆ ಬತ್ತಿ ಹಾಕಿ, ದೀಪವುರಿಸುವ ಸಂಪ್ರದಾಯವಿದೆ. ತಲೆ ಮತ್ತು ಕಾಲುಗಳ ಹತ್ತಿರ ಒಂದು ಸೇರು ಅಕ್ಕಿ ಮತ್ತು ಒಂದು ಸೇರು ಭತ್ತ ಇಡುವ ಸಂಪ್ರದಾಯವೂ ಇದೆ.

**ಶವಸ್ನಾನ:** ಹಸಿ ತೆಂಗಿನ ಗರಿಯನ್ನು ತೆಂಕು ತುದಿ ಮಾಡಿ ಅಂಗಳದಲ್ಲಿಟ್ಟು ಅದರ ಮೇಲೆ ಶವವನ್ನು ಮಲಗಿಸಿ ಅರಸಿನ ಹುಡಿ ಮತ್ತು ಸೀಗೆ ಹುಡಿ ಹಚ್ಚಿ ಬಿಸಿ ನೀರಲ್ಲಿ ಮೀಯಿಸುತ್ತಾರೆ. ಸ್ನಾನದ ನಂತರ ಪುನಃ ಶವವನ್ನು ಒಳಗೆ ಕೊಂಡು ಹೋಗಿ ಗಂಡಸಾದರೆ ಕಚ್ಚೆ ಉಡಿಸುತ್ತಾರೆ. ಹೆಂಗಸಾದರೆ ಸೀರೆ ಉಡಿಸುತ್ತಾರೆ. ಉದ್ದಾರ ವಿಧವೆಯರಲ್ಲದಿದ್ದರೆ ಮದುವೆಯಂತೆ ಶೃಂಗಾರ ಮಾಡುತ್ತಾರೆ. ಬಿದಿರು ಧಾರಾಳ ಇರುವ ಕಡೆಯಾದರೆ ಬಿದಿರಿನ ಚಟ್ಟದಲ್ಲಿ, ಬಿದಿರು ಇಲ್ಲದಿದ್ದರೆ ತೆಂಗಿನ ಗರಿಯ ದಂಡಿಯಿಂದ ಮಾಡಿದ ಚಟ್ಟದಲ್ಲಿ ಶವವನ್ನು ಮಲಗಿಸಿ ದಹನಕ್ಕೆ ಕೊಂಡು ಹೋಗುತ್ತಾರೆ. ದಹನಕ್ಕೆ ಮೊದಲು ಒಂದು ತೆಂಗಿನ ಕಾಯಿಯನ್ನು ಕಾಷ್ಠಕ್ಕೆ ಹಾಕಿ ಕಾಷ್ಠ ಶುದ್ಧ ಮಾಡುವ ಕ್ರಮವಿದೆ. ಸುಡುವ ಮೊದಲು ಶವದ ಮೈಮೇಲಿರುವ ಚಿನ್ನಾಭರಣವೆಲ್ಲ(ಇದ್ದರೆ) ಕಳಚಿಡುತ್ತಾರೆ. ಕೆಲವರು ಮನೆಯಲ್ಲೇ ಅದನ್ನು ಕಳಚಿಡುತ್ತಾರೆ. ದಹನವಾದ ಐದು, ಏಳು ಅಥವಾ ಒಂಬತ್ತನೆಯ ದಿನ ಅಸ್ಥಿ ಸಂಚಯನ(ಚಿತೆಯಲ್ಲಿ ಸುಟ್ಟು ಉಳಿದ ಎಲುಬು ತುಂಡುಗಳ ಸಂಗ್ರಹ) ಮಾಡುತ್ತಾರೆ.

**ಕೊಳ್ಳ ಮಗ್ರ್ಪೋಣ್:** ತುಳುವರಲ್ಲಿ ಈ ಕಾರ್ಯಕ್ರಮ ಜಾರಿಯಲ್ಲಿದೆ. ದಹನವಾದ ಮೇಲೆ ಚಿತೆಯಲ್ಲಿ ಉಳಿದಿರುವ ಎಲುಬುಗಳನ್ನು  ಸಂಗ್ರಹಿಸಿ ಬಳಿಕ ಅಲ್ಲಿರುವ ಮಣ್ಣನ್ನು ಗುಡ್ಡೆ(ರಾಶಿ)ಮಾಡಿ. ಅದರ ಮೇಲೆ ಒಂದು ಮಾವಿನ ಎಲೆಯ ಗೊಂಚಲು. ಸೀಯಾಳ. ದೋಸೆ ಇತ್ಯಾದಿಗಳನ್ನು ಇಟ್ಟು ಬರುತ್ತಾರೆ. ಮಸಣದಿಂದ ತಂದ ಎಲುಬು ತುಂಡುಗಳನ್ನು ಸಮುದ್ರಕ್ಕೆ ವಿಸರ್ಜನೆ ಮಾಡುತ್ತಾರೆ. ಹತ್ತನೆಯದಿಂದ ಶುದ್ಧಕಾರ್ಯ. ಹನ್ನೊಂದು ಅಥವಾ ಹದಿಮೂರರಂದು ಬ್ರಾಹ್ಮಣ ಪುರೋಹಿತರು ಕಡಲ ತೀರದಲ್ಲಿ ಹೋಮ. ಪಿಂಡ ಪ್ರದಾನಾದಿ ಕ್ರಿಯೆಗಳನ್ನು ನಡೆಸುತ್ತಾರೆ. ನಂತರ ಹದಿಮೂರನೆಯ ದಿನ ಉಲಾಯತಿಪ್ಪುನು(ಒಳಗೆ ಕರೆಯುವುದ) ಕ್ರಿಯೆ ಜರುಗುತ್ತದೆ. ಆ ದಿನ ಕಡಬು ಇತ್ಯಾದಿ ತಯಾರಿಸುತ್ತಾರೆ. ಮನೆಯ ಒಂದು ಕೋಣೆಯಲ್ಲಿ ಎಲ್ಲವನ್ನೂ ಬಡಿಸಿ ಸತ್ತವರನ್ನು ಹೂಗಳಲ್ಲಿ, ಗುರಿಕಾರರು 'ಉಲಾಯ ಬಲಸ್ ದೌಂಡ್ಕ್ಕೆ ಕೊನೊಡು"(ಒಳಗೆ ಬಡಿಸಿದ್ದೇವೆ ಸ್ವೀಕರಿಸಿ ಎನ್ನುತ್ತಾರೆ) ಮಡಿದ ವ್ಯಕ್ತಿಯ ತಂಗಿ ಅಥವಾ ಮಗಳು ಒಂದು ಗಿಂಡಿಯಲ್ಲಿ ನೀರು ತುಂಬಿಸಿ ಕೈಯಲ್ಲಿ ಒಡಕ್ಕೊಂಡು ಬಾಗಿಲ ಹತ್ತಿರ ನಿಂತು'ಯಲಾಯಿ  ಬಲೆ'(ಒಳಗೆ ಬನ್ನಿ)ಎನ್ನುತ್ತಾರೆ. ಸ್ವಲ್ಪ ಹೊತ್ತು ಆ ಕೋಣೆಯ ಬಾಗಿಲನ್ನು ಹಾಕಿಡುತ್ತಾರೆ. ಬಳಿಕ ಬಾಗಿಲು ತೆರೆದು ನೀರು ಸಿಂಪಡಿಸಿ ಆ ಕಡಬು ಪ್ರಸಾದವೆಂದು ಮಡಿದವನ ಮಕ್ಕಳು ಹಾಗೂ ಕುಟುಂಬಸ್ಥರು ಊಟ ಮಾಡುತ್ತಾರೆ.

**ಅಗೆಲ್ ಬಲಸುನೆ:** ಕಡೇಕಾರಿನಲ್ಲಿ ಅಗೆಲ್ ಬಲಸುನೆ ಎಂಬ ಪದ್ಧತಿ ಇದೆ. ವಾರ ಹಬ್ಬದ ದಿವಸ ಮದುವೆಯ ಮುಂಚಿನ ದಿನ ಹಾಗೂ ಚೌತಿ, ಅಷ್ಟಮಿ ಮುಂತಾದ ವಿಶೇಷ ದಿನಗಳಲ್ಲಿ ಪಿತೃಗಳನ್ನು ಜ್ಞಾಪಿಸಿಕೊಂಡು ಈ ಕಾರ್ಯಕ್ರಮವು ನಡೆಯುತ್ತದೆ.

**ಕನ್ಯಾವು ಬಲಸುನೆ: ಇದು** ಶನಿವಾರರವೇ ಆಗಬೇಕು. ಒಂದು ರೀತಿಯ ಪಿತೃಕ್ರಿಯೆ. ಗಂಜಿಗೆ ಬೆಲ್ಲ ತೆಂಗಿನಕಾಯಿ ಹಾಕಿ ಮಾಡಿದ ಪಾಯಸವನ್ನು ಹೊಂಗಾರಕನ ಎಲೆಯಲ್ಲಿ ಬಳಸಿ, ಸತ್ತ ಹಿರಿಯರನ್ನು ನೆನಪಿಸಿಕೊಂಡು 'ಜೋಕುಲೆಗ್ ಉಪದ್ರೊ, ಕೊರಿಯರ ಬಲ್ಲಿ'(ಮಕ್ಕಳಿಗೆ ಪೀಡೆ ಕೊಡಬಾರದು) ಎನ್ನುತ್ತಾರೆ. ಆ ಪಾಯಸವನ್ನು ಮಕ್ಕಳಿಗೆ ಉಣಿಸುತ್ತಾರೆ.

**ಆರ್ಥಿಕತೆಯಲ್ಲಿ ಮಹಿಳೆಯರ ಪಾತ್ರ**

ಕಡೇಕಾರರು ಗ್ರಾಮದ ಮೊಗವೀರ ಮಹಿಳೆಯರು ಮತ್ಸ್ಯೋದ್ಯಮದಲ್ಲಿ ತೊಡಗಿಸಿಕೊಂಡು ಪ್ರಗತಿ ಸಾಧಿಸಿದ್ದಾರೆ. ಇಲ್ಲಿಯ ಅನೇಕ ಸ್ತ್ರೀಯರು ಮೀನುಗಾರಿಕೆ ಮತ್ತು ಸಂಸ್ಕರಣ ಕೈಗಾರಿಕೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪುರುಷರಿಗಿಂತ ಅಧಿಕ ಸಂಖ್ಯೆಯಲ್ಲಿ ಮಹಿಳೆಯರೇ ತೊಡಗಿಸಿಕೊಂಡಿದ್ದಾರೆ. ಇಲ್ಲಿನ ಮೊಗವೀರ ಮಹಾಜನ ಸಂಘದ ಅಧಿಕೃತ ಹೇಳಿಕೆಯಂತೆ ಸದ್ಯಕ್ಕೆ ಜಿಲ್ಲೆಯಲ್ಲಿ ೨.೫.ಲಕ್ಷದಷ್ಟು ಜನ ಮೊಗವೀರ ಸ್ತ್ರೀಯರಿದ್ದಾರೆ ಎನ್ನಲಾಗಿದೆ. ಕಡೇಕಾರು ಗ್ರಾಮ ಪಂಚಾಯತ್‌ನ ಹೇಳಿಕೆಯಂತೆ ಮೊಗವೀರ ಮಹಿಳೆಯರು ಪುರುಷರಿಗಿಂತ ಅಧಿಕ ಸಂಖ್ಯೆಯಲ್ಲಿ ದುಡಿಮೆ ಮಾಡುತ್ತಿದ್ದಾರೆ. ಹೆಚ್ಚಿನವರು ಮೀನು ಸಂಸ್ಕರಣ ಘಟಕದಲ್ಲಿ ಕೆಲಸ ಮಾಡಿಕೊಂಡಿದ್ದಾರೆ ಹಾಗೂ ಈಗ ಸುಮಾರು ಶೇಖಡ ೫೦ ರಿಂದ ೬೦ ಹೆಂಗಸರು ಮೀನುಗಾರಿಕೆಯ ಘಟಕಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

**ಮೀನುಗಾರಿಕೆ ಕ್ಷೇತ್ರದಲ್ಲಿ ಪುರುಷರು ಮತ್ತು ಮಹಿಳೆಯರ ಪಾತ್ರ**

ಕಡಲಿನಿಂದ ಮೀನುಗಳನ್ನು ಜೇದಿಸಿ ಹಿಡಿದು ತಂದು ಪ್ರಾಂಗಣಕ್ಕೆ ಸುರಿಯುವ ಕೆಲಸವನ್ನು ಇವರು ಮಾಡುತ್ತಾರೆ. ಮಧ್ಯವರ್ತಿಗಳಿಗೆ ಹರಾಜು ಹಾಕುವ ಜವಾಬ್ದಾರಿಯನ್ನು ಮಂಡಳ ನೀಡಿರುತ್ತದೆ. ಹರಾಜು ಕೂಗುವಾಗ ಆಸಕ್ತರು ಅದನ್ನು ಖರೀದಿಸಿ ವಾಹನಗಳ ಮೂಲಕ ಮಾರುಕಟ್ಟೆಗೆ ತೆಗೆದುಕೊಂಡು ಹೋಗುತ್ತಾರೆ.

೧. **ನಿರ್ದಿಷ್ಟ ಸ್ಥಳಕ್ಕೆ ಸಾಗಿಸುವುದು:** ಕ್ಯಾರಿಯರ್ ಬೋಟು ತಂದ ಮೀನನ್ನು ಹೆಂಗಸರು ಬುಟ್ಟಿಯಲ್ಲಿ ಹೊತ್ತುಕೊಂಡು ಪ್ರಾಂಗಣಕ್ಕೆ ಸುರಿಯುತ್ತಾರೆ. ಈ ಹಂತದಲ್ಲಿ ನಮ್ಮ ಕಡೇಕಾರು ಮೊಗವೀರ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಸುರಿದ ಮೀನುಗಳನ್ನು ದಲ್ಲಾಳಿಗಳು ಬೇರೆ ಬೇರೆ ಸ್ಥಳಗಳಿಗೆ ವರ್ಗಾವಣೆ ಮಾಡುತ್ತಾರೆ. ಈ ಕ್ರಿಯೆಯಲ್ಲಿ ಸಾವಿರಾರು ಮಹಿಳೆಯರು ಕೆಲಸ ಮಾಡುತ್ತಾರೆ. ಬೇರೆ ಬೇರೆ ಪಾಲು ಮಾಡಿ ಎಲಂ ಕೂಗುತ್ತಾರೆ. ಮಾಲೀಕರು ಮೀನುಗಳನ್ನು ಖರೀದಿಸಿ ವಾಹನಗಳಿಗೆ ಹಾಕುತ್ತಾರೆ. ಅನೇಕ ಮಹಿಳೆಯರು ಕೂಲಿಗಾಗಿ ಬುಟ್ಟಿಯಲ್ಲಿ ಹೊತ್ತು ವಾಹನಗಳಿಗೆ ಹಾಕುವ ಕೆಲಸ ಮಾಡುತ್ತಾರೆ. ನಂತರ ವಾಹನಗಳು ಮಾರುಕಟ್ಟೆಗೆ ಮೀನನ್ನು ಕೊಂಡ್ಯೊಯುತ್ತವೆ.

೨. **ಮೀನಿನ ವಿಂಗಡನೆ ಮಾಡುವುದು:** ಇದು ಮಹಿಳೆಯರಿಗೆ ಅಚ್ಚುಮೆಚ್ಚಿನ ಕೆಲಸ. ಮೀನು ವಿಂಗಡನೆ ಮಾಡುವುದರಲ್ಲಿ ಅತೀ ಹೆಚ್ಚು ಪ್ರಾವಿಣ್ಯತೆ ಇವರಿಗಿದೆ. ಮೀನುಗಾರರು ಎಲ್ಲಾ ಜಾತಿಯ ಮೀನುಗಳನ್ನು

ಹಿಡಿದು ತಂದು ಒಟ್ಟಿಗೇ ಪ್ರಾಂಗಣಕ್ಕೆ ಸುರಿಯುತ್ತಾರೆ. ಆದರೆ ಜಾತಿಗನುಗುಣವಾಗಿ ವಿಂಗಡನೆ ಮಾಡಬೇಕು. ಪರಿ ಪರಿಯಾಗಿ ಮೀನುಗಳನ್ನು ವಿಂಗಡನೆ ಮಾಡುವ ಕೆಲಸವನ್ನು ಮಹಿಳೆಯರು ನಿರ್ವಹಿಸುತ್ತಾರೆ. ವಿಂಗಡಿಸಿದ ಮೀನುಗಳನ್ನು ಬೇರೆ ಬೇರೆಯಾಗಿ ರಾಶಿ ಹಾಕಿದ ಮೇಲೆ ದಲ್ಲಾಳಿಗಳು ಖರೀದಿಸುತ್ತಾರೆ.

**ಮೀನು ಮಾರಾಟ:** ಮೀನನ್ನು ಖರೀದಿಸಿ ಪಾಲುದಾರರು ಖಾಸಗಿ ವಾಹನಗಳಲ್ಲಿ ತಂದು ಮಾರುಕಟ್ಟೆಗೆ ಇಳಿಸುತ್ತಾರೆ. ಮಹಿಳೆಯರು ಆ ಮೀನುಗಳನ್ನು ತೆಗೆದುಕೊಂಡು ವಿವಿಧ ಭಾಗಗಳಲ್ಲಿ, ಪ್ರದೇಶಗಳಲ್ಲಿ, ಮೀನು ಮಾರಾಟ ಮಾಡುತ್ತಾರೆ.

**ಮೀನು ಮಾರಾಟದ ವಿಧಾನಗಳು**

**ಮನೆ ಮನೆಗೆ ಹೋಗಿ ಮಾರುವುದು:** ಬೆಳಗ್ಗೆ ಪ್ರಾಂತ್ಯಕಾಲದಲ್ಲಿ ಮನೆಯ ಕೈಂಕಾರ್ಯಗಳನ್ನು ಮುಗಿಸಿ ಕಡೇಕಾರು ಗ್ರಾಮದ ಮಹಿಳೆಯರು ವ್ಯಾಪಾರಕ್ಕೆ ಹೊರಡುತ್ತಾರೆ. ತಮ್ಮ ದೈನಂದಿನ ವೃತ್ತಿಯನ್ನು ತಮಗೆ ಹೊರಲು ಸಾಧ್ಯವಾದಷ್ಟು ಮೀನುಗಳನ್ನು ಮಾತ್ರ ಬುಟ್ಟಿಯಲ್ಲಿ ಹೊತ್ತುಕೊಂಡು ಊರುಕೇರಿಗಳಲ್ಲಿ ಮನೆ ಮನೆಗೆ ಹೋಗಿ ಮಾರಾಟ ಮಾಡುತ್ತಾರೆ. ಸುಮಾರು ದಿನಕ್ಕೆ ೮ರಿಂದ ೧೦ ಕಿ.ಮೀ. ಕಾಲು ನಡಿಗೆಯಲ್ಲಿಯೇ ಕ್ರಮಿಸುತ್ತಾರೆ. ತಮಗೆ ಆಗುವ ದೈಹಿಕ ಶ್ರಮವನ್ನು ನಿವಾರಣೆ ಮಾಡಿಕೊಳ್ಳಲು ಅಲ್ಲಲ್ಲಿ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ. ಇವರೇನೂ ಬುತ್ತಿಗಳನ್ನು ತೆಗೆದುಕೊಂಡು ಹೋಗುವುದಿಲ್ಲ. ಹೋದಲ್ಲೇ ಊಟ, ತಿಂಡಿ, ನೀಡು ಎಲ್ಲಾ ಆಗುತ್ತದೆ. ಅದಕ್ಕೆ ಪ್ರತಿಯಾಗಿ ಮೀನುಗಳನ್ನು ಸ್ವಲ್ಪ ಜಾಸ್ತಿಯೇ ನೀಡಿ ಬರುವುದುಂಟು. ಇವರು ಗ್ರಾಹಕರನ್ನು ಹುಡುಕಿಕೊಂಡು ಹೋಗಿ ವ್ಯಾಪಾರ ಮಾಡುವುದರಿಂದ ಅನೇಕರು ಮಿತ್ರರಾಗುತ್ತಾರೆ. ಇವರು ಜನರ ಬೇಡಿಕೆಯ ಮೀನುಗಳನ್ನು ತೆಗೆದುಕೊಂಡು ಹೋಗುತ್ತಾರೆ. ಅವರ ಪ್ರೀತಿ ವಿಶ್ವಾಸ, ಅಪಾರವಾದ ನಂಬಿಕೆ ಹೇಗಿರುತ್ತದೆ ಅಂದರೆ ಆ ನಿರ್ದಿಷ್ಟ ಹೆಂಗಸನ್ನು ಬಿಟ್ಟು ಬೇರೆಯಾರಿಂದಲೂ ಮೀನು ತೆಗೆದುಕೊಳ್ಳುವುದಿಲ್ಲ. ಒಂದು ವೇಳೆ ತೆಗೆದುಕೊಂಡರೂ ಅದು ತುರ್ತು ಪರಿಸ್ಥಿತಿಗಷ್ಟೆ. ಈ ಗರತಿಯರಿಗೇ ಅವರ ಮಾತಿನ ಚಾತುರ್ಯವೇ ಸಂಪತ್ತು. ಬುಟ್ಟಿ ಖಾಲಿಯಾದ ಮೇಲೆ ಮನೆಗೆ ಹಿಂದಿರುಗುತ್ತಾರೆ. ಹಿಂದಿನ ಕಾಲದಲ್ಲಿ ಈ ಗ್ರಾಮದ ಮಹಿಳೆಯರು ದೂರದ ಘಟ್ಟ ಪ್ರದೇಶಗಳಿಗೆ ಅಂದರೆ ತೀರ್ಥಹಳ್ಳಿ, ಸಾಗರದವರೆಗೂ ಮೀನುಗಳನ್ನು ಬುಟ್ಟಿಯಲ್ಲಿ ಹೊತ್ತುಕೊಂಡು ಮಾರಾಟ ಮಾಡಿ ಬರುತ್ತಿದ್ದರು. ಇದು ಸಾಕಷ್ಟು ದಿನಗಳನ್ನು ತೆಗೆದುಕೊಳ್ಳುತ್ತಿತ್ತು. ದಾರಿ ಮಧ್ಯದಲ್ಲಿ ವಿಶ್ರಾಂತಿ ತೆಗೆದುಕೊಳ್ಳಲು ಅಲ್ಲಲ್ಲಿ ಪರಿಚಿತರ ಮನೆಗಳು ಇರುತ್ತಿದ್ದವು.

**ಮಾರುಕಟ್ಟೆಯಲ್ಲಿ ಮಾರುವುದು:**

ನಮ್ಮ ಕಡೇಕಾರು ಗ್ರಾಮದಲ್ಲಿ ಸುಮಾರು ೫೦ ಕುಟುಂಬಗಳು ಮಾರುಕಟ್ಟೆಯಲ್ಲಿ ಮೀನು ಮಾರುತ್ತಾರೆಂದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಇವರು ಸಾಯಂಕಾಲದ ವೇಳೆ ಹೆಚ್ಚಾಗಿ ಮೀನು ಮಾರಾಟಕ್ಕೆ ಹೋಗುತ್ತಾರೆ. ಕೆಲವರು ಬೆಳಗ್ಗೆಯಿಂದಲೂ ಮೀನು ಮಾರಾಟ ಮಾಡುತ್ತಾರೆ. ಅಲ್ಲಲ್ಲಿ ಪುಟ್ಟ ಪುಟ್ಟ ಮೀನು ಮಾರುಕಟ್ಟೆಯನ್ನು ಮಾಡಿಕೊಂಡು ಗ್ರಾಮಪಂಚಾಯತ್ ಅನುಮತಿ ಮೇರೆಗೆ ಮೀನು

ಮಾರಾಟ ಮಾಡುತ್ತಾರೆ. ಮೀನು ಮಾರಾಟ ಮಾಡುವುದರಲ್ಲಿ ಮೊಗವೀರ ಸ್ತ್ರೀಯರು ಅತೀ ಪ್ರವೀಣರು. ಅವರ ಮಾತಿನ ಚಾತುರ್ಯಕ್ಕೆ ಎಂತಹ ಜಿಪುಣ ಗ್ರಾಹಕನು ವ್ಯಾಪಾರ ಮಾಡಿಕೊಂಡು ಹೋಗುತ್ತಾನೆ. ಮೀನು ಮಾರುವ ಹೆಂಗಸರು ಒಂದು ಚಾರ್‌ಡಲ್ ಅಥವಾ ಚರಿಯನ್ನು ಉದ್ದಕ್ಕೆ ಹರಡಿ ಮೀನನ್ನು ಜಾತಿಗನುಗುಣವಾಗಿ ಸಣ್ಣ ಸಣ್ಣ ರಾಶಿ ಹಾಕಿ ಒಂದು ರಾಶಿಗೆ ಇಂತಿಷ್ಟು ಬೆಲೆ ಅಂತ ನಿಗದಿ ಮಾಡಿ ಮಾರಾಟ ಮಾಡುತ್ತಾರೆ. ಈ ಹೆಂಗಸರು ಸುಮಾರು ರಾತ್ರಿ ೮ ಗಂಟೆಯವರೆಗೂ ಮೀನು ಮಾರಾಟ ಮಾಡುತ್ತಾರೆ. ಕಡೇಕಾರು ಗ್ರಾಮದಲ್ಲಿ ಚಿಕ್ಕ ಚಿಕ್ಕ ಪ್ಲಾಸ್ಟಿಕ್ ಜರಿಗಳನ್ನು ಮೀನು ಹಾಕಲು ಬಳಸುತ್ತಾರೆ.

**ಅಂಗಡಿಯಲ್ಲಿ ಮೀನು ಮಾರಾಟ:**

ಆಧುನಿಕ ಕಾಲಘಟ್ಟದಲ್ಲಿ ಇದರ ಅಂಗಡಿಯ ಬಳಕೆ ಹೇರಳವಾಗಿದೆ. ಐಸ್ ಹಾಗೂ ಘನೀಕರಣ ಯಂತ್ರಗಳ(ಫ್ರೀಜ್) ಆವಿಷ್ಕಾರದಿಂದ ಮೀನು ಹಾಳಾಗದಂತೆ ಅಂಗಡಿಗಳಲ್ಲಿ ಇಟ್ಟು ಮಾರುತ್ತಾರೆ. ಕಡೇಕಾರು ಗ್ರಾಮದಲ್ಲಿ ೫ ರಿಂದ ಇಂಥ ಅಂಗಡಿಗಳು ನನಗೆ ನೋಡಲು ಸಿಕ್ಕಿವೆ. ಐಸ್ ಸೇರಿಸುವುದರಿಂದ ಮೀನು ಆರಂಭದ ಸ್ಥಿತಿಯಲ್ಲಿಯೆ ಗ್ರಾಹಕರಿಗೆ ಸಿಗುತ್ತವೆ. ಆದರೆ ಇಲ್ಲಿ ಸಿಗುವ ಮೀನುಗಳಿಗೆ ಜಾಸ್ತಿ ಹಣವಿರುತ್ತವೆ. ಲೆಕ್ಕಚಾರದಲ್ಲಿ ಮೀನುಗಳು ಸಿಗುತ್ತಿದೆ. ಇದು ಎಲ್ಲಾ ಕಾಲದಲ್ಲಿಯೂ ತೆರೆದುಕೊಂಡಿರುತ್ತದೆ. ದಿನದ ಯಾವ ಸಮಯದಲ್ಲಿಯೂ ಕೂಡ ದೊರಕುತ್ತದೆ. ಹಸಿಮೀನು ಮತ್ತು ಒಣಮೀನು ರೂಪದಲ್ಲಿ ಮೀನು ಮಾರಾಟ ನಡೆಯುತ್ತದೆ.

**ಹಸಿಮೀನು:**

ಇದನ್ನು ನೇರವಾಗಿ ಮಾರಾಟ ಮಾಡುತ್ತಾರೆ. ಕಡೇಕಾರು ಗ್ರಾಮದ ಮಹಿಳೆಯರು ಹಸಿಮೀನುಗಳನ್ನು ಹೆಚ್ಚಾಗಿ ಮಾರಾಟ ಮಾಡುತ್ತಾರೆ. ಹಸಿ ಮೀನುಗಳನ್ನು ಇನ್ನೊಂದು ಪ್ರಕಾರದಲ್ಲಿಯೂ ಮಾರಾಟ ಮಾಡುತ್ತಾರೆ. ದೊಡ್ಡ ಮೀನುಗಳನ್ನು ಸೀಳು ಮಾಡಿ ಕರಳು ಮುಂತಾದವುಗಳನ್ನು ಬೇರ್ಪಡಿಸಿ ಶುಚಿ ಮಾಡುವ ಕೆಲಸವನ್ನು ಮಹಿಳೆಯರು ಮಾಡುತ್ತಾರೆ. ಸಣ್ಣ ಮೀನುಗಳನ್ನು ಸೀಳುತ್ತಿರಲಿಲ್ಲ. ಒಂದು ಮಣ ಉಪ್ಪನ್ನ ಮೂರು ಮಣ ಮೀನನ್ನು ಹದ ಮಾಡಲು ಬಳಸಲಾಗುತ್ತಿತ್ತು. ಹದ ಮಾಡಿದ ಮೀನು ರಫ್ತು ಮಾಡುತ್ತಿದ್ದರು. ಉಪ್ಪಿನ ಜೊತೆಗೆ ಹುಣಸೆ ಹಣ್ಣನ್ನು ಬಳಸಿ ಹದ ಮಾಡುತ್ತಿದ್ದರು. ಇದನ್ನು ಕೊಲಂಬೋ ಕ್ಯೊರಿಮಗ್ ಎಂದು ಕರೆಯುತ್ತಾರೆ. ಈ ಮೀನನ್ನು ಯಾವುದೇ ಕಾರಣಕ್ಕೂ ಬಿಸಿಲಿಗೆ ತರುತ್ತಿರಲಿಲ್ಲ. ಈ ಮೀನು ಒಣಗಿಸಿದ ಮೀನಿಗಿಂತಲೂ ರುಚಿಯಾಗಿರುತ್ತದೆ. ಇದು ಹೆಚ್ಚು ಕಾಲ ಇಡಲು ಬರುವುದಿಲ್ಲ.

**ಒಣ ಮೀನು ಮಾರಾಟ:**

ತಾಜಾ ಮೀನು ಮಾರಾಟದ ನಂತರ ಉಳಿದ ಮೀನನ್ನು ಸಮುದ್ರದ ಅಂಚಿನ ಮರಳಿನ ಮೇಲೆ ಒಣಗಿಸುತ್ತಿದ್ದರು. ಕಾರವಾರದಿಂದ ಬಂಗುಡೆ, ಭೂತಾಯಿ ಮೀನುಗಳನ್ನು ಹಿಡಿಯುವ ಮೊದಲು ಋತುಕಾಲದಲ್ಲಿ ಮುಂಬಯಿನಿಂದ ದೊಡ್ಡ ದೋಣಿಗಳು ಬಂದು ರಂಪಣಿಯಲ್ಲಿ ಹಿಡಿದ ಮೀನನ್ನು ಮುಂಬಯಿಗೆ ರವಾನಿಸುತ್ತಿದ್ದರು. ಒಣಗಿಸಿದ ಗೋಲ್, ಶಾರ್ಕ್, ಕ್ಯಾಡೆ ಮತ್ತು ಬಂಗುಡೆ ಮೀನುಗಳನ್ನು

ಮೀನುಗಾರರಿಂದ ಮಧ್ಯವರ್ತಿಗಳು ಖರೀದಿಸಿ ಮಂಗಳೂರಿನಿಂದ ಕೊಲಂಬಿಯಕ್ಕೆ ರಫ್ತು ಮಾಡಲಾಗುತ್ತಿತ್ತು ಹಿಡಿದ ಮೀನನ್ನು ಮೀನುಗಾರ ಮಹಿಳೆಯರು ತಲೆಯ ಮೇಲೆ ಹೊತ್ತು ಮಾರುಕಟ್ಟೆಗಳಿಗೆ ತಂದು ಮಾರಾಟ ಮಾಡುತ್ತಿದ್ದರು. ಉಳಿದ ಕೆಲವು ಭಾಗವನ್ನು ಉಪ್ಪು ಬಳಸಿ ಹದ ಮಾಡಿ ಶೇಖರಿಸುತ್ತಿದ್ದರು. ಸರ್ಕಾರವು ಮೀನು ಹದ ಮಾಡುವ ಕೇಂದ್ರಗಳನ್ನು ಸ್ಥಾಪಿಸಿದೆ. ಈ ಕೇಂದ್ರಗಳು ದಕ್ಷಿಣ ಕನ್ನಡ ಜಿಲ್ಲೆಯ ಉಳ್ಳಾಲ, ಮಂಗಳೂರು, ಬೆಂಗ್ರೆ, ಬೊಕ್ಕೆಂಪಾಡಿ, ಕುಳೈ, ಹೊಸಬೆಟ್ಟು, ಮುದ್ದಿ, ಕಾಪು, ಉದ್ಯಾವರ, ಮಲ್ಪೆ, ಹಂಗಾರಕಟ್ಟೆ, ಗಂಗೊಳ್ಳಿ, ಮರವಂತೆ, ಕಿರಿಮಂಜೇಶ್ವರ, ತಾರಪತ್ತಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಸ್ಥಾಪಿಸಿದೆ.

**ಮೀನು ಸಂಸ್ಕರಣ ಘಟಕಗಳಲ್ಲಿ ಮಹಿಳೆಯರು:**

ಕಡೇಕಾರು ಗ್ರಾಮದಲ್ಲಿ ಮೊಗವೀರ ಹೆಂಗಸರು ಅನೇಕ ಮೀನು ಸಂಸ್ಕರಣ ಘಟಕಗಳಲ್ಲಿ ಕಾರ್ಯನಿರ್ವಹಿಸುತ್ತಾರೆ. ಈ ಸಂಸ್ಕರಣ ಘಟಕಗಳು ಖಾಸಗಿ ಒಡೆತನಕ್ಕೆ ಬರುತ್ತದೆ. ಹೆಚ್ಚಿನ ಮಾಲೀಕರು ಮೋಗವೀರರೇ ಆಗಿರುತ್ತಾರೆ. ಹತ್ತಾರು ಘಟಕಗಳು ಈ ಭಾಗದಲ್ಲಿ ಕೆಲಸ ಮಾಡಿಕೊಂಡು ಬಂದಿವೆ. ಸಾವಿರಾರು ಮಹಿಳೆಯರು ಇದನ್ನು ತಮ್ಮ ದುಡಿಮೆಯ ಅಂಗಳವಾಗಿಸಿಕೊಂಡಿದ್ದಾರೆ. ಇದರಿಂದಲೇ ಅವರ ಜೀವನಾವರ್ತನ ಆಚರಣೆಗಳು ನಡೆಯುತ್ತದೆ. ಇಲ್ಲಿ ಇವರಿಗೆ ಯೋಗ್ಯ ರೀತಿಯ ಸಂಬಳ ಮತ್ತು ಪಿಎಫ್ ಸಹ ಸರ್ಕಾರ ಯೋಜನೆಯ ಮೂಲಕ ಸಿಗುತ್ತವೆ. ಮೀನುಗಳನ್ನು ಸಂಸ್ಕರಣೆ ಮಾಡುವುದರಲ್ಲಿ ಮಹಿಳೆಯರು ಚಾತುರ್ಯರು. ಇವರು ನಿರ್ವಹಿಸುವ ಅನೇಕ ಕೆಲಸಗಳನ್ನು ಗಂಡಸರು ನಿರ್ವಹಿಸಲು ಸಾಧ್ಯವಿಲ್ಲ. ತುಂಬಾ ಆತ್ಮೀಯತೆಯಿಂದ ಹೆಚ್ಚು ಬುದ್ಧಿವಂತಿಕೆಯಿಂದ ದುಡಿಮೆ ಮಾಡುತ್ತಾರೆ. ಬೆಳಗ್ಗೆಯಿಂದ ಸಾಯಂಕಾಲದವರೆಗೂ ಹಾಗೂ ಅನಿವಾರ್ಯತೆ ಬಿದ್ದರೆ ರಾತ್ರಿಯಲ್ಲಿ ಕೆಲಸಗಳನ್ನು ಮಾಡಿಕೊಂಡಿರುತ್ತಾರೆ. ಆಧುನಿಕತೆಯೂ ಈ ಮೀನುಗಾರಿಕಾ ಕ್ಷೇತ್ರಕ್ಕೆ ಕಾಲಿಟ್ಟಿರುವುದು ನಮಗೆ ಗೊತ್ತಿರುವ ವಿಚಾರವೇ. ಮೀನು ಸಂಸ್ಕರಣ ಘಟಕಗಳಲ್ಲಿ ನವೀಕೃತ ಯಂತ್ರಗಳನ್ನು ನಾವು ನೋಡಬಹುದಾಗಿದೆ. ಈ ಯಂತ್ರಗಳನ್ನು ಉಪಯೋಗಿಸುವುದರಲ್ಲಿ ಮಹಿಳೆಯರು ನಿಪುಣರು. ಸಂಸ್ಕರಣೆಯ ಪ್ರಾಥಮಿಕ ಕೆಲಸದಿಂದ ಹಿಡಿದು ವಿನಿಮಯದವರೆಗೂ ಸ್ತ್ರೀಯರು ನಿರಂತರವಾಗಿ ದುಡಿಯುತ್ತಾರೆ. ಅವರ ಕೆಲಸದ ವಿವರಗಲು ಹೀಗಿವೆ,

೧. ಮೀನಿನ ಎಣ್ಣೆ ತೆಗೆಯುವುದು

೨. ಮೀನು ಗೊಬ್ಬರ ತಯಾರಿಕೆ

೩. ಮೀನಿನ ಪುಡಿಗಳನ್ನು ತಯಾರಿಸುವುದು

೪. ಮೀನಿನ ಸಾರಾಯಿ ತಯಾರಿಕೆ

೫. ಮೀನಿನ ಮಾತ್ರೆಗಳು ಮತ್ತು ಔಷಧಿಗಳ ತಯಾರಿಕೆ

**ಶೀತಲೀಕರಣದ ಮೂಲಕ ಮೀನು ಶೇಖರಣೆ:**

೧೯೬೦ರಿಂದೀಚೆಗೆ ಭರ್ಫ್ ಕಾರ್ಖಾನೆಗಳು ಸ್ಥಾಪನೆಯಾದ ನಂತರ ಹಿಡಿದ ಮೀನನ್ನು ಭರ್ಫ್‌ದಲ್ಲಿ ಶೇಖರಿಸಿಕೊಂಡು ಮಾರುಕಟ್ಟೆಗಳಿಗೆ ವಾಹನಗಳ ಮೂಲಕ ರವಾನೆ ಮಾಡಲಾಗುತ್ತಿತ್ತು. ಮೊದಲಿಗೆ ಸೀಮೆಎಣ್ಣೆ ಡಬ್ಬಗಳಲ್ಲಿ ಅಥವಾ ಹಗುರವಾದ ಮರದ ಪೆಟ್ಟಿಗೆಗಳಲ್ಲಿ ಮೀನು ಮತ್ತು ಭರ್ಫ್‌ನ್ನು ಪದರಗಳಲ್ಲಿ ಶೇಖರಿಸಿ ಬಸ್ ಅಥವಾ ಲಾರಿಗಳ ಮುಖಾಂತರ ಕಳುಹಿಸಲಾಗುತ್ತಿತ್ತು. ಮೀನಿನ ಉತ್ಪಾದನೆ ಮತ್ತು ರಫ್ತಿನ ಪ್ರಮಾಣ ಅಧಿಕವಾದಂತೆ, ಮೀನನ್ನು ಭರ್ಫಿನಲ್ಲಿ ಶೇಖರಿಸಿ ಶೀತಲಗ್ರಹಗಳನ್ನು ಸಂಗ್ರಹಿಸಲಾಯಿತು. ಖಾಸಗಿಯಾಗಿ ನಡೆಸುವ ಈ ಘಟಕಗಳಿಗೆ ಸಹಾಯಧನವನ್ನು ಸರಕಾರವು ನೀಡಿದೆ. ಮೊದಲು ಬಂಗುಡೆ, ಭೂತಾಯಿ ಮುಂತಾದ ಮೀನುಗಳನ್ನು ಡಬ್ಬಗಳಲ್ಲಿ ಶೇಖರಿಸಿ ದೇಶದ ಪೂರ್ವದ ಘಟ್ಟ ರಾಜ್ಯಗಳಿಗೆ ರವಾನಿಸುತ್ತಿದ್ದರು. ಸಣ್ಣ ಮೀನುಗಳಿಗಾಗಿ ಫಿಶ್ ಮೀಲ್ ತಯಾರಿಸುವ ಘಟಕಗಳು ಸ್ಥಾಪನೆಯಾದವು.

**ಮಹಿಳೆಯರ ಆರ್ಥಿಕತೆಯ ನಿರ್ವಹಣೆ ಮತ್ತು ಬ್ಯಾನ:**

ಕುಟುಂಬದಲ್ಲಿ ಮಹಿಳೆ ತನ್ನ ನಿರಂತರ ದುಡಿಮೆಯ ಮೂಲಕ ಮುಖ್ಯಸ್ಥಾನದಲ್ಲಿದ್ದಾಳೆ. ಕಡೇಕಾರು ಗ್ರಾಮದಲ್ಲಿ ಮನೆಯ ಯಜಮಾನತಿ ಅಥವಾ ಅಕ್ಕ ಎಂಬ ಪದ ಬಳಕೆಯಲ್ಲಿದೆ. ಇದಕ್ಕೆ ಕಾರಣ ಹೆಣ್ಣು ಮನೆಯ ಆರ್ಥಿಕತೆಯ ಮೂಲಕಾರಣೀಕಗಳಾಗುತ್ತಾಳೆ. ಮನೆಯಲ್ಲಿ ನಡೆಯುವ ಎಲ್ಲಾ ಜವಾಬ್ದಾರಿಗಳನ್ನು ಅವಳೇ ಹೊರುತ್ತಾಳೆ. ಜೊತೆಗೆ ಹೊರಗಿನ ಕೌಟುಂಬಿಕ ದುಡಿಮೆಯನ್ನು ಕೂಡ ಮಾಡಿಕೊಳ್ಳುತ್ತಾಳೆ. ತನ್ನ ವಿಶೇಷವಾದ ಕೌಶಲ್ಯಗಳಿಂದ ಮನೆಯನ್ನು ನಿರ್ವಹಣೆ ಮಾಡುತ್ತಾಳೆ. ಒಂದು ಮನೆಯೊಳಗೆ ಸಾವಿರಾರು ತಾಪತ್ರ್ಯಗಳು ಇರುತ್ತವೆ. ನೂರಾರು ವಿಘ್ನಗಳು ಬರುತ್ತದೆ. ಅವನ್ನೆಲ್ಲಾ ಹಿಮ್ಮೆಟ್ಟಿ ಮುಂದೆ ಸಾಗುತ್ತಾಳೆ. ತುಂಬ ಜಾಕಚಕ್ಯತೆಯಿಂದ ಗಂಡ, ಮಕ್ಕಳು, ಹಿರಿಯರು, ಬಂಧುಗಳು, ಇತರರ ಜೊತೆಗೆ ಕೌಟುಂಬಿಕ ವ್ಯವಹಾರ ಮಾಡುತ್ತಾ ಅವರ ಎಲ್ಲಾ ಬೇಕು ಬೇಡಗಳನನ್ನು ಪೂರೈಸಿಕೊಂಡು, ದೈನಂದಿನ ವ್ಯವಹಾರ, ಹಬ್ಬ, ಮದುವೆ, ಧಾರ್ಮಿಕ ಕಾರ್ಯಕ್ರಮಗಳು ಎಲ್ಲವನ್ನೂ ನಿಬಾಯಿಸುತ್ತಾಳೆ. ಮಕ್ಕಳ ಶಿಕ್ಷಣ, ಸಂಘ-ಸಂಸ್ಥೆಗಳಲ್ಲಿ ಭಾಗವಹಿಸುವಿಕೆಯನ್ನು ಕಡೇಕಾರು ಗ್ರಾಮದಲ್ಲಿ ನಾವು ಕಾಣಬಹುದಾಗಿದೆ.

**ಮನೆಯ ವ್ಯವಹಾರಗಳ ನಿರ್ವಹಣೆ:**

ಬೆಳಗ್ಗೆ ಎದ್ದು ಮನೆಯ ಕೆಲಸಗಳು, ಗಂಡನ ಸೇವೆ ಮತ್ತು ಮಕ್ಕಳ ಸೇವೆ, ಹಿರಿಯರ ಸೇವೆಯನ್ನು ಮುಗಿಸಿ ವ್ಯವಹಾರಕ್ಕೆ ಹೋಗಬೇಕು. ಎಲ್ಲಾ ಹೆಣ್ಣುಮಕ್ಕಳ ಮುಖ್ಯವಾದ ಜವಾಬ್ದಾರಿ ಮನೆಯ ನಿರ್ವಹಣೆಯಾಗಿರುತ್ತದೆ. ಹಾಗೆಯೇ ಕಡೇಕಾರು ಗ್ರಾಮದಲ್ಲಿ ಹೆಂಗಸರು ಇವುಗಳನ್ನು ನಿಭಾಯಿಸಿ ದುಡಿಮೆ ಮಾಡಲು ಹೋಗುತ್ತಾರೆ. ಸಂಜೆ ಬಂದು ಮನೆಯ ಎಲ್ಲಾ ಕೆಲಸಗಳನ್ನು ನಿಭಾಯಿಸುತ್ತಾರೆ. ಮನೆಯ ಸಣ್ಣಪುಟ್ಟ ವಿಪತ್ತುಗಳನ್ನು ಮಹಿಳೆಯರೇ ನಿರ್ವಹಣೆ ಮಾಡುತ್ತಾಳೆ. ಮನೆಯಲ್ಲಿ ಆಗುವ ಮದುವೆ, ಗೃಹಪ್ರವೇಶ, ಬಯಕೆ, ಬಾಣಂತನ, ಮಗು ಜನನ, ನಾಮಕರಣ, ಮಕ್ಕಳ

ಪೋಷಣೆ, ವಿದ್ಯಾಭ್ಯಾಸ, ಹೆಣ್ಣಮಕ್ಕಳಾದರೆ ಋತುಮತಿ, ಗಂಡು ನೋಡುವುದು, ಮದುವೆ, ಇನ್ನಿತರ ಕಾರ್ಯಕ್ರಮಗಳು ಹಾಗೂ ವಾರ್ಷಿಕ ಆಚರಣೆಗಳು, ಹಬ್ಬಗಳು, ಜನ್ಮದಿನ, ಇನ್ನಿತರ ವಿಶೇಷ ದಿನಾಚರಣೆಗಳೆಲ್ಲವನ್ನು ಮಹಿಳೆಯರೇ ನಿಭಾಯಿಸಿಕೊಂಡು ಉತ್ತಮವಾಗಿ ಬದುಕುತ್ತಿದ್ದಾರೆ.

**ಮಕ್ಕಳ ವಿದ್ಯಾಭ್ಯಾಸದ ನಿರ್ವಹಣೆ:**

ಒಂದು ಹೆಣ್ಣು ಪರಿಪೂರ್ಣವಾಗಬೇಕಾದರೆ ಮಕ್ಕಳು ಇರಲೇಬೇಕು. ಮಕ್ಕಳ ಜೀವನ ಉತ್ತಮವಾಗಬೇಕಾದರೆ ಅವರಿಗೆ ಸೂಕ್ತ ರೀತಿಯ ಶಿಕ್ಷಣದ ಅವಶ್ಯಕತೆ ಇರುತ್ತದೆ. ಇದನ್ನು ಮೋಗವೀರ ಮಹಿಳೆಯರು ಅರ್ಥ ಮಾಡಿಕೊಂಡಿದ್ದಾರೆ. ಕಡೇಕಾರು ಗ್ರಾಮದಲ್ಲಿ ಮಕ್ಕಳ ಶಿಕ್ಷಣದ ಮಟ್ಟ ಉನ್ನತ ಮಟ್ಟದಲ್ಲಿದೆ. ಅದಕ್ಕೆ ಕಾರಣ ಆ ಭಾಗದ ತಾಯಂದಿರು  ಯೋಗ್ಯ ರೀತಿಯಲ್ಲಿ ಕಾಳಜಿ ವಹಿಸುತ್ತಾರೆ. ಶಾಲಾ ಕಾಲೇಜುಗಳಿಗೆ ಪದೇ ಪದೇ ಭೇಟಿ ನೀಡುತ್ತಾರೆ. ಪೋಷಕ-ರಕ್ಷಕ ಸಭೆಗಳಲ್ಲಿ ತಪ್ಪದೇ ಭಾಗವಿಸುತ್ತಾರೆ. ಉತ್ತಮವಾದ ಮುತುವರ್ಜಿವಹಿಸಿ ಮನೆಯಲ್ಲಿ ಓದಲು ಅವಕಾಶ ಕೊಟ್ಟು ಸಣ್ಣಪುಟ್ಟ ಕಾರ್ಯಕ್ರಮಗಳಿಗೆ ಗೈರು ಹಾಜರಾಗದಂತೆ ನೋಡಿಕೊಳ್ಳುತ್ತಾರೆ. ಮಕ್ಕಳಿಗೆ ಸಿಗುವ ಸಣ್ಣಪುಟ್ಟ ಕಾರ್ಯಕ್ರಮಗಳೂ ವಿವಿಧ. ಲಲಿತಕಲೆಗಳು. ಯಕ್ಷಗಾನ. ಸಾಹಿತ್ಯ ಪ್ರಕಾರಗಳು ಮುಂತಾದವುಗಳಿಗೆ ತಾಯಂದಿರು ಪ್ರೋತ್ಸಾಹ ನೀಡುತ್ತಾರೆ. ಈ ರೀತಿಯಾಗಿ ಮಕ್ಕಳ ವಿದ್ಯಾಭ್ಯಾಸದ ನಿರ್ವಹಣೆ ಮಾಡುತ್ತಾರೆ. ಮಕ್ಕಳ ಕಾರ್ಯಕ್ರಮಗಳಲ್ಲಿ ತಾವು ಭಾಗವಹಿಸುವುದರಿಂದ ಅವರಿಗೆ ಉತ್ತೇಜನ ಸಿಕ್ಕಿದಂತಾಗುತ್ತದೆ. ಕಡೇಕಾರು ಗ್ರಾಮದಲ್ಲಿ ಮೋಗವೀರ ಮಗುವೊಂದು ಯಕ್ಷಗಾನ ಕಲೆಯ ಮೂಲಕ ದೆಹಲಿಗೆ ಹೋಗಿ ಸೋನಿಯಾ ಗಾಂಧೀ ಮೊದಲಾದವರೊಂದಿಗೆ ಪೋಟೋ ತೆಗೆಸಿಕೊಂಡು ಬಂದಿದೆ. ಇದು ನಾಟಕ, ಯಕ್ಷಗಾನ ಮುಂತಾದ ಲಲಿತಕಲೆಗಳಲ್ಲಿ ಪ್ರತಿಭಾವಂತ ಮಗುವಾಗಿದೆ. ಇದಕ್ಕೆ ನನ್ನ ತಾಯಿಯೇ ಕಾರಣ ಎಂದು ಹೆಮ್ಮೆಯಿಂದ ಅವನು  ಹೇಳಿಕೊಂಡಿರುತ್ತಾನೆ.

**ಕೂಡಿಡುವ ಪದ್ಧತಿ:**

ಕಡೇಕಾರು ಗ್ರಾಮದಲ್ಲಿ ಮೋಗವೀರ ಮಹಿಳೆಯರು ಮುಂದೆ ಬರುವ ವಿಪತ್ತುಗಳಿಗೆ ಪ್ರಾರಂಭದಿಂದಲೇ ಸ್ವಲ್ಪ ಸ್ವಲ್ಪ ಕೂಡಿಡುವ ಪರಿಪಾಠ ಇಟ್ಟುಕೊಂಡಿರುತ್ತಾರೆ. ಹೆಂಗಸರ ಮೊದಲನೇ ಉಳಿತಾಯ ಸಂಗ್ರಹಣೆಯ ಆರಂಭ ಬಟ್ಟೆಯ ಪೆಟ್ಟಿಗೆ, ಅಡುಗೆ ಮನೆಯಲ್ಲಿರುವ ಸಾಮಾನುಗಳ ಪೆಟ್ಟಿಗೆಗಳಿಂದ ಪ್ರಾಥಮಿಕವಾಗಿ ಮಾಡುತ್ತಾರೆ. ನಂತರ ಪಕ್ಕದ ಮನೆಯ ಗೆಳತಿಯಲ್ಲಿ, ಆ ಮೇಲೆ ಕಂತುದಾರರಲ್ಲಿ, ಪೋಸ್ಟ್‌ಗಳಲ್ಲಿ, ಬ್ಯಾಂಕುಗಳಲ್ಲಿ, ಮಕ್ಕಳ ಹಳೆಯ ಪುಸ್ತಕಗಳಲ್ಲಿ ಉಳಿತಾಯ ಸಂಗ್ರಹಣೆ ಮಾಡುತ್ತಾರೆ.

**ಬ್ಯಾಂಕುಗಳಲ್ಲಿ ಮತ್ತು ಸಂಘಗಳಲ್ಲಿ ಮಹಿಳೆಯರ ಉಳಿತಾಯ:**

ಕಡೇಕಾರು ಗ್ರಾಮದ ಮೊಗವೀರ ಹೆಂಗಸರು ಬ್ಯಾಂಕುಗಳಲ್ಲಿ ವ್ಯವಹಾರ ಮಾಡುವುದನ್ನು ಬಲ್ಲರು. ಈ ಭಾಗದಲ್ಲಿರುವ ಸಿಂಡಿಕೇಟ್ ಬ್ಯಾಂಕಿಗೆ ಹೋಗಿ ಮೀನು ಮಾರಾಟದಲ್ಲಿ ಬಂದ ಹಣವನ್ನು ಮನೆಯ ನಿರ್ವಹಣೆಯನ್ನು ಮಾಡಿ ಉಳಿದ ಹಣದಲ್ಲಿ ಬ್ಯಾಂಕಿನಲ್ಲಿಡುತ್ತಾರೆ. ಕಡೇಕಾರು ಗ್ರಾಮ

ಮಹಿಳೆಯರ ವಿಶೇಷವೆಂದರೆ ಮೀನು ಮಾರಾಟ ಮಾಡುತ್ತಿರುವ ಎಲ್ಲಾ ಮಹಿಳೆಯರಿಗೆ ಬ್ಯಾಂಕ್ ಖಾತೆ ಇರುತ್ತದೆ. ಇದೊಂದು ಉತ್ತಮವಾದ ಬೆಳವಣಿಗೆಯಾಗಿದೆ.

**ಸಂಘಗಳಲ್ಲಿ ಮಹಿಳೆಯರ ಉಳಿತಾಯ:**

ಕಡೇಕಾರು ಗ್ರಾಮದಲ್ಲಿ ಅನೇಕ ಸಂಘಗಳು ಇವೆ. ಇದರಲ್ಲಿ ಹೆಚ್ಚಿನ ಮಹಿಳೆಯರು ಸದಸ್ಯರಾಗಿರುತ್ತಾರೆ. ಸ್ತ್ರೀಶಕ್ತಿ ಸಂಘ ಇದು ಹಳೆಯ ಯೋಜನೆಯಾದರೂ ಇಂದಿಗೂ ಕಡೇಕಾರು ಗ್ರಾಮದಲ್ಲಿದೆ. ಇದರೊಂದಿಗೆ, ಮೊಗವೀರ ಮಹಿಳಾ ಸಂಘ, ಸಹಕಾರ ಬ್ಯಾಂಕ್‌ಗಳು ಮುಂತಾದವುಗಳಲ್ಲಿ ಸಾಲದ ನಿರ್ವಹಣೆ, ವ್ಯವಹಾರಗಳನ್ನು ಮಾಡಿಕೊಳ್ಳುತ್ತಾರೆ. ಬ್ಯಾಂಕುಗಳಿಂದ ಸಂಘ–ಸಂಸ್ಥೆಗಳಿಂದ ಸಾಲದ ನೆರವು, ಸಾಲದ ನಿರ್ವಹಣೆ ಉತ್ತಮವಾಗಿರುತ್ತದೆ. ಇವುಗಳು ನೀಡುವ ಸಾಲಗಳೆಂದರೆ ಮೀನುಗಾರರ ಸಾಲ, ಮೀನುಗಾರಿಕೆ ಮನೆ ಸಾಲ, ಶೈಕ್ಷಣಿಕ ಸಾಲ, ಕೌಶಲ್ಯ ತರಬೇತಿಗಳಿಗಾಗಿ ಸಾಲ ಮುಂತಾದವು. ಮೀನುಗಾರರಿಗಾಗಿ ಸಹಕಾರಿ ಸಂಘಗಳನ್ನು ಸುಮಾರು ೫೦ ವರ್ಷ ಮುಂಚೆಯೇ ಸ್ಥಾಪಿಸಿದ್ದಾರೆ. ಇವುಗಳು ಮಹಿಳೆಯರಿಗಾಗಿ ಕೆಲವೊಂದು ಸಂಘಗಳನ್ನು ಯೋಜನೆಗಳನ್ನು ರೂಪಿಸಿವೆ.

**ಮಹಿಳಾ ಮೀನುಗಾರರ ಸಹಕಾರಿ ಸಂಘಗಳ ಸ್ಥಾಪನೆಗೆ ಸಹಾಯ:**

ಮೀನುಗಾರಿಕೆ ಮಹಿಳೆಯರು ತಮ್ಮದೇ ಆದ ಸಹಕಾರ ಸಂಘಗಳನ್ನು ಸ್ಥಾಪಿಸಲು ಸಹಾಯಧನ ನೀಡಲಾಗುತ್ತಿತ್ತು. ಮೊಟ್ಟ ಮೊದಲಿಗೆ ಮಲ್ಪೆಯಲ್ಲಿ ಪ್ರಥಮ ಮೀನುಗಾರ ಮಹಿಳೆಯರ ಸಹಕಾರ ಸಂಘವನ್ನು ೧೯೭೭ರಲ್ಲಿ ಸ್ಥಾಪಿಸಲಾಯಿತು. ಇದರಲ್ಲಿ ೨೦ ಮಹಿಳಾ ಮೀನುಗಾರರ ಸಹಕಾರಿ ಸಂಘಗಳಿಗೂ ಕೊಡಲು ಅನುವು ಮಾಡಲಾಯಿತು. ಮಹಿಳಾ ಸಹಕಾರಿ ಸಂಘಗಳ ಸದಸ್ಯರಿಗೆ ಮೀನು ವ್ಯಾಪಾರಕ್ಕೆ ಬೇಕಾಗುವ ಮೂಲಧನ, ಮೀನು ಮಾರಾಟಕ್ಕೆ ಬೇಕಾಗುವ ಸಲಕರಣೆಗಳನ್ನು ಕೊಳ್ಳಲು ಸಾಲ, ಮೀನು ಹದ ಮಾಡುವುದಕ್ಕೆ ಸಾಲ ನೀಡಿಕೆಯಾಗಿದೆ. ಇದರಲ್ಲಿ ಸಾಕಷ್ಟು ಮಹಿಳೆಯರು ದುಡಿಮೆಯ ಹಣವನ್ನು ಉಳಿತಾಯ ಮಾಡಿದ್ದಾರೆ.

**ಮೀನುಗಾರ ಮಹಿಳೆಯರಿಗೆ ಸಹಕಾರಿ ಸಂಘಗಳಿಂದ ಆವರ್ತನಿಧಿ:**

ಮೀನುಗಾರ ಮಹಿಳೆಯರಿಗೆ ಮೀನು ಮಾರಾಟ ಮಾಡುವಲ್ಲಿ ಬೇಕಾದ ಸಲಕರಣೆಗಳಲ್ಲಿ ಕೊಂಡು ಸರಬರಾಜು ಮಾಡಲು ಪ್ರತಿ ಸಹಕಾರ ಸಂಘಕ್ಕೆ ಬೇಕಾದ ರಿವಾಲ್ವಿಂಗ್ ಫಂಡ್‌ನ್ನು ಒದಗಿಸಲಾಗಿದೆ.

**ಮೀನು ಮಾರಾಟಕ್ಕೆ ಸಹಾಯ ಮತ್ತು ಮತ್ಸ್ಯಾವಾಹಿನಿ ಅಡಿಯಲ್ಲಿ ವಾಹನಗಳನ್ನು ಪಡೆಯಲು ಸಹಾಯ:**

ಈ ಯೋಜನೆಯಲ್ಲಿ ಮೀನುಗಾರರು ಹಸಿ ಮೀನನ್ನು ರವಾನಿಸಿ ಆರೋಗ್ಯಕರವಾಗಿ ಮಾರಾಟ ಮಾಡಲು ಒಂದು ಬೈಸಿಕಲ್ ಮತ್ತು ಒಂದು ಶಾಖನಿರೋದಕ ಪೆಟ್ಟಿಗೆಯನ್ನು ಕೊಂಡುಕೊಳ್ಳಲು ತಗಲುವ ವೆಚ್ಚದ ಶೇಕಡ ೫೦ರಷ್ಟು ಭಾಗ ಧನ ಸಹಾಯವಾಗಿ ಗರಿಷ್ಟ ರೂ.೧೨೫೦ ಕೊಡಲಾಗಿದೆ.

**ಧಾರ್ಮಿಕ ಮತ್ತು ಸಾಂಸ್ಕೃತಿಕ ವಲಯದಲ್ಲಿ ಮೀನುಗಾರಿಕಾ ಮಹಿಳೆಯರ ಪಾತ್ರ**

ತುಳುನಾಡಿನ ಮೊಗವೀರರು ಭೂತಾರಾಧಕರು ಎಂಬುದು ತಿಳಿದಿರುವ ವಿಷಯ. ಕಡೇಕಾರಿನಲ್ಲಿಯೂ ಭೂತಾರಾಧನೆಯನ್ನು ನಂಬಿ ಮೊಗವೀರರು ವಾಸವಾಗಿದ್ದಾರೆ. ಇವರ ಮೂಲದೈವ ಬೊಬ್ಬರಿಯನಾದರೂ ಕೂಡ ಪಂಜುರ್ಲಿ ಮತ್ತು ಬೈರಾಡ್ತಿ ಅಮ್ಮನನ್ನು ಬಲವಾಗಿ ನಂಬುತ್ತಾರೆ. ಇವರ ಕುಲದೇವತೆ ಮಾಸ್ತಿಯಮ್ಮ, ಮಹಾಲಕ್ಷ್ಮಿ, ಮಹಿಷವರ್ದಿನಿ, ವೈಷ್ಣವರಾಗಿ, ತಿರುಪತಿ ವೆಂಕಟರಮಣನನ್ನು ಸಹ ಪೂಜಿಸುತ್ತಾರೆ. ಇವರಲ್ಲಿ ಹೌದೇರಾಯನ ವಾಲ್ಗ, ಶನಿಪುರಾಣ, ಸಾವಿರಹಣ್ಣಿನ ವಸಂತ ಹರಿಸೇವೆ ಮೊದಲಾದವು ಹೆಚ್ಚಾಗಿವೆ.

**ಹೌಂದೇರಾಯನ ವಾಲ್ಗ(ಕುಣಿಕೆಹಾಡು)**:

ಈ ಆಚರಣೆ ಕಡೇಕಾರರು ಗ್ರಾಮದಲ್ಲಿಯೂ ಸಹ ಕಂಡುಬರುತ್ತದೆ. ಈ ಸೇವೆಯಲ್ಲಿ ಮಹಿಳೆಯರು ಗಂಡಸರೊಂದಿಗೆ ತೆಂಗಿನಕಾಯಿ ಒಡೆದು ಮಂಚದ ಮೇಲೆ ಇಡುತ್ತಾರೆ. ಒಡೆದ ಕಾಯಿಗಳಲ್ಲಿ ಶ್ರೀನಿವಾಸ, ಮಂಜುನಾಥ, ಕಾಲಭೈರವ, ಕಾವೇರಮ್ಮ, ಸುಬ್ರಮಣ್ಯ ದೇವರಿಗೆ ಯಥಾಶಕ್ತಿ ಕಾಣಿಕೆಯನ್ನು ಹಾಕುತ್ತಾರೆ. ಇದಕ್ಕೆ 'ಕಾಸು ಕಟ್ಟುವುದು' ಎಂದು ಕರೆಯುತ್ತಾರೆ. ಈ ಕಾರ್ಯಕ್ರಮದಲ್ಲಿ ಬಂದವರಿಗೆ ಪಾನೀಯ ಅವರ ಆರೈಕೆ ಮತ್ತು ಊಟ ಉಪಚಾರ ಎಲ್ಲಾದರ ಜವಾಬ್ದಾರಿ ಮನೆಯ ಹೆಣ್ಣುಮಕ್ಕಳದ್ದಾಗಿರುತ್ತದೆ.

**ಹರಿಸೇವೆ:**

ಈ ಆಚರಣೆ ಅಂಗವಾಗಿ ನಡೆಯುವ ಕೊಳ್ಳುವುದು, ಗಳಮೂರ್ತ, ಅಂತರ ಚಪ್ಪರಮೂರ್ತ, ಕಲಶ ಸ್ಥಾಪನೆ, ಮುರಿನ ಬೇಟೆ, ಜೋಗಿ ಪಾತ್ರೆ, ಮುಡಿಪು ಕಟ್ಟುವುದು ಈ ಎಲ್ಲ ಕಾರ್ಯಕ್ರಮದಲ್ಲಿಯೂ ಮಹಿಳೆಯರ ಭಾಗವಹಿಸುವಿಕೆ ಇದೆ. ಮೊಗವೀರರು ಸ್ತ್ರೀಯರು ತಮ್ಮ ಬೇಕು ಬೇಡಗಳನ್ನು ತೊಂದರೆ ತಾಪತ್ರ್ಯಗಳನನ್ನು ದೂರ ಮಾಡಲೆಂದು ಭೂತಾರಾಧನೆ, ದರ್ಶನ ಸೇವೆ, ಕೆಂಡಸೇವೆ, ಸಿಡಿಸೇವೆ ಮೊದಲಾದವುಗಳನ್ನು ಮಾಡುತ್ತಾರೆ.

**ಮಹಿಳೆಯರ ಆಚರಣೆಗಳು**

ಭೂತಗಳನ್ನು ನೇಮ-ಕೋಲಾ ಅಗೆಲು-ಗಂಬಿಲ ಮತ್ತು ದರ್ಶನ ಸೇವೆಗಳ ಮೂಲಕ ಆರಾಧಿಸಲಾಗುತ್ತದೆ. ದೈವ-ದೇವಾಲಯಗಳಲ್ಲಿ ಸಾಂಪ್ರದಾಯಿಕ ಪೂಜೆ ಜರುಗುತ್ತದೆ. ಇವರಲ್ಲಿ ಅರ್ಚಕರು ಮೊಗವೀರರೇ ಆಗಿರುತ್ತಾರೆ. ಭಂಡಾರ ಗುಡಿಗಳಲ್ಲದ ಕಡೆ ಮೂರ್ತಿಯನ್ನು ರಚನೆ ಮಾಡಿ, ಅದರ ಮುಂದೆ ಕೋಲ ನಡೆಸುತ್ತಾರೆ. ಉದಾಹರಣೆಗೆ ಪೊಸೆಟ್ಟಿ(ಕೊರತಿಯ) ಕೋಲ, ಸೀಯಾಳವೊಂದನ್ನು ನಾಜೂಕಾಗಿ ಕೆತ್ತಿ, ಹೆಣ್ಣಿನ ಮುಖದ ಆಕೃತಿ ಬರಸಿ, ಅದನ್ನು ಕೊಡದ ಮೇಲಿಟ್ಟು, ಸೀರೆ ಉಡಿಸಿ, ಭೂತ ಮೂರ್ತಿಯ ಸಂಕೇತವಾಗಿ ಭ್ರಮಿಸಿಕೊಂಡು ಅದರ ಮುಂದೆ ಕೂಲದ ನಂತರ ಆ ಸೀಯಾಳವನ್ನು ಕಡಲಲ್ಲಿ

ಎಸೆಯುತ್ತಾರೆ. ಸಿಡಿ ಸೇವೆ ಮೆಕ್ಕೆಕಟ್ಟೆನಲ್ಲಿರುವ ಬ್ರಹ್ಮಸ್ಥಾನದ ಮೈದಾನದಲ್ಲಿ ನಡೆಯುತ್ತದೆ. ಕೆಂಡಸೇವೆಯೂ ಎಲ್ಲಾ ದೇವ ದೇವರ ಸನ್ನಿಧಾನದಲ್ಲಿ ನಡೆಯುತ್ತದೆ. ಅದರಂತೆ ಮಡೆಸ್ನಾನ(ಉರುಳು ಸೇವೆ) ಎಂಬ ಸೇವೆಯೂ ಎಲ್ಲಾ ಭಾಗಗಳಲ್ಲಿ ನಡೆಯುತ್ತದೆ. ಕಡೇಕಾರು ಗ್ರಾಮದಲ್ಲಿ ಮೊಗವೀರರು ಉಚ್ಚಿಲದ ಶ್ರೀ ಮಹಾಲಕ್ಷ್ಮೀ ಅಮ್ಮನವರ ಹೋಬಳಿಗೆ ಬರುತ್ತಾರೆ. ಈ ಗ್ರಾಮದಲ್ಲಿ ಆರಾಧನೆಯನ್ನು ಮಹಿಳೆಯರೇ ಮಾಡುತ್ತಾರೆ. ಮಹಿಳೆಯರ ಆರಾಧನೆ ಕಲೆಗಳಿಗೆ ಪುರುಷರು ಪ್ರೋತ್ಸಾಹ ಕೊಡುತ್ತಾರೆ. ಮನೆಯಲ್ಲಿ ಏನೇ ತೊಂದರೆ ಕಾಣಿಸಿದರು ಇವರು ದೇವರಿಗೆ ಮೊರೆ ಹೋಗುತ್ತಾರೆ. ಅರಿಕೆಗೆ ಪ್ರತಿಯಾಗಿ ಉಪವಾಸ ಮಾಡುವುದು, ಕೆಂಡಸೇವೆ, ಉರುಳುಸೇವೆ ಮುಂತಾದವುಗಳನ್ನು ಪಾಲಿಸುತ್ತಾರೆ.

**ಸಮುದ್ರ ಮತ್ತು ನದಿಯ ಆಚರಣೆಗಳಲ್ಲಿ ಮಹಿಳೆಯ ಪಾತ್ರ**

ಕಡೇಕಾರು ಗ್ರಾಮದಲ್ಲಿ ದೋಣಿ ಪೂಜೆ ನಡೆಯುತ್ತದೆ. ಇದರಲ್ಲಿ ಮಹಿಳೆಯರು ಭಾಗವಹಿಸುತ್ತಾರೆ. ಅಕ್ಕಿಯನ್ನು ಗಟ್ಟಿಯಾಗಿ ರುಬ್ಬಿ ಅದರ ಒಳಗೆ ಬೆಲ್ಲದ ಹೂರಣವನ್ನು ತುಂಬಿಸುತ್ತಾರೆ. ಅದಕ್ಕೆ ಕುಂದಾಪುರದಲ್ಲಿ ಸೆಟೆಯಿಟ್ಟು ಎನ್ನುತ್ತಾರೆ. ಆ ತಿಂಡಿಯನ್ನು ದೋಣಿಯಲ್ಲಿರಿಸಿ, ದೀಪವುರಿಸುತ್ತಾರೆ. ಬೊಬ್ಬರಿಯನಿಗೆ ಒಂದು ತುಂಡು ಬಿಡಿಸಿ, ಉಳಿದದ್ದನ್ನು ದೊಜ್‌ಗೂ, ಕಡಲಿಗೂ ಇಟ್ಟು ಕೈ ಮುಗಿಯುತ್ತಾರೆ.

**ನೇತ್ರಾಣಿ ಹರಕೆ:**



ಇದೊಂದು ಗುಡ್ಡ. ಇಲ್ಲಿ ನೇತ್ರಾಣಿ ಎನ್ನುವ ಹೆಣ್ಣು ದೇವರು ಇದ್ದಾರೆ. ಇದಕ್ಕೆ ಸರಣಿ ಪೂಜೆ ಎಂದು ಕರಯುತ್ತಾರೆ. ನೇತ್ರಾಣಿ ಎಂದರೆ ಒಂದು ಹೆಣ್ಣು ದೇವತೆ. ಅವಳು ಶಿವನ ಕಣ್ಣಿನಿಂದ ಹುಟ್ಟಿದವಳು. ಮಳೆಗಾಲ ಮುಗಿದ ಮೇಲೆ ಮೋಗವೀರರು ಪೂಜೆ ನಡೆಸುತ್ತಾರೆ.

**ಕಡಲ ಪೂಜೆ:**

ಕಡೇಕಾರು ಗ್ರಾಮದ ಮೊಗವೀರರು ಈ ಪೂಜೆ ಮಾಡುತ್ತಾರೆ. ಮೊಗಪೀರರು ಕಡಲನ್ನು ಗಂಗೆಯೆಂದು ನಂಬುತ್ತಾರೆ. ಕಡಲಪೂಜೆಗೆ ಗಂಗಾಪೂಜೆಯೆಂದು ಹೆಸರು.

**ನಿರಾಣಿ ಪೂಜೆ:**

ಕೆಲವೊಂದು ಊರುಗಳಲ್ಲಿ ನಿರಾಣಿ ಪೂಜೆ ಮಾಡುತ್ತಾರೆ. ಈ ಪೂಜೆಯಲ್ಲಿ ಮಹಿಳೆಯರು ಭಾಗವಹಿಸುತ್ತಾರೆ.

**ಪಟ್ಟೇಮಡಿ ಪೂಜೆ** ಕಡಲಿನ ಅಬ್ಬರವಿಳಿದು ಕಡಲು ಶಾಂತವಾಗುವುದಕ್ಕೆ ಪಟ್ಟೆ ಬೀಳುವು ಎನ್ನುತ್ತಾರೆ. ಇದಕ್ಕೂ ಪುಜೆ ಮಾಡುತ್ತಾರೆ.

**ಹಬ್ಬ ಜಾತ್ರೆಗಳಲ್ಲಿ ಮಹಿಳೆಯರ ಪಾತ್ರ:**

ಹಬ್ಬ ಹರಿದಿನಗಳು ಮುಖ್ಯವಾಗಿ ಮಹಿಳೆಯರಿಗೇ ಮೀಸಲು. ಅವರೇ ಸೂತ್ರದಾರರು ಹಾಗೂ ಪಾತ್ರದಾರರು ಹೌದು.

**ಅಷಾಡ್ಡಿ ಹಬ್ಬ:** ಕಡೇಕಾರು ಗ್ರಾಮದ ಮೊಗವೀರ ಮಹಿಳೆಯರು ಆಷಾಡ ಮಾಸದ ದಿನ ಈ ಆಚರಣೆಯನ್ನು ನಡೆಸುತ್ತಾರೆ. ವಿಶೇಷವಾದ ಕ್ಯಾನೆಗೆಂಡೆ ಕಡಬು ತಯಾರು ಮಾಡುತ್ತಾರೆ.

**ಅಜ್ಜಿಹಬ್ಬ:**

ಕಡೇಕಾರು ಗ್ರಾಮದ ವನಿತೆಯರು ಸೋಣಾಮಾಸದ ಸಂಕ್ರಾಂತಿ ದಿನದಂದು ಹೆಂಗಸರು ಸ್ನಾನ ಮಾಡಿ ಒಂದು ಹೊಸ್ತಿಲಲ್ಲಿ ಪೂಜೆ ನಡೆಸುತ್ತಾರೆ. ಸೋಣೆ ಹೂ(ಈ ಮಾಸದಲ್ಲಿ ಹುಟ್ಟುವ ಹೊಸ ರೀತಿಯ ಹೂ) ಹೊತ್ತಿನ ಹೂ(ಸಂಜೆ ಮಲ್ಲಿಗೆ) ಉದ್ದು ಅಥವಾ ಹೆಸರನ್ನು ಧಾನ್ಯವಾಗಿ ಬಳಸಿ ಅದು ಚಿಕ್ಕ ಚಿಕ್ಕ ಗಿಡವಾದ ಬಳಿಕೆ ಸ್ವಲ್ಪ ಸ್ವಲ್ಪ ಕಿತ್ತು ಹೊಸ್ತಿಗೆ ಪೂಜೆ ಮಾಡುತ್ತಾರೆ. ಮುಂದಿನ ಸಂಗ್ರಮಣದ ಒಳಗೆ ಹೊಸ್ತಿಯಾ ಪೂಜೆಯ ಕೊನೆಯದಿನ ಅಜ್ಜಿ ಎಂಬ ಹಬ್ಬವನ್ನು ಮಾಡುತ್ತಾರೆ. ಬೆಳಗ್ಗೆ ಹೊಸ್ತಿಲ ಪೂಜೆ ಮಾಡದೆ ಸಾಯಂಕಾಲ ಹೊಸ್ತಿಲ ಪೂಜೆ ಮಾಡಿ ದೋಸೆ ಇಟ್ಟು, ದೀಪ ಬೆಳಗಿ, ತೆಂಗಿನಕಾಯಿ ಒಡೆಯುತ್ತಾರೆ. ಅಜ್ಜಿಗೆ ಮೊಮ್ಮಕ್ಕಳೆಂದರೆ ಅತೀ ಪ್ರೀತಿ. ಅದಕ್ಕೆ ಅಜ್ಜಿಗೆ ಬಡಿಸಿದ ದೋಸೆಯನ್ನು ಮನೆಯಲ್ಲಿರುವ ಚಿಕ್ಕ ಮಕ್ಕಳು ಕದ್ದು ಓಡುತ್ತಾರೆ(ಇದಕ್ಕೆ ಮಧ್ಯ ಸೂತಕ ಬರಬಾರದು).

**ಚೌತಿ ಹಬ್ಬ:**

ಹೆಂಗಸರು ಒಂದು ಗುಂಪಾಗಿ ಸೇರಿ ಸಂಭ್ರಮದ ಅಡುಗೆ ಆದ ಮೇಲೆ ಕಾರ್ಯಕ್ರಮ ನಡೆಸುತ್ತಾರೆ. ಗಣೇಶನ ಪೂಜೆ ಮಾಡಿ ಸಂಭ್ರಮಿಸುತ್ತಾರೆ.

**ಹೊಸತು:**

ಹೊಸತು ಎಂಬ ವಿಶೇಷವಾದ ಆಚರಣೆ ಇಲ್ಲಿದೆ. ಹೊಸ ಧಾನ್ಯವು ಮನೆಗೆ ಬರುವ ಸಮಯದಲ್ಲಿ ಈ ಆಚರಣೆ ಮಾಡುತ್ತಾರೆ. ಮಹಿಳೆಯರು ಸ್ವಲ್ಪ ಧಾನ್ಯಗಳನ್ನು ಕೈಯಲ್ಲಿ ಬಿಡಿಸಿ ಅನ್ನ ಮಾಡಿ ಎಲ್ಲರಿಗೂ ಬಡಿಸುತ್ತಾರೆ. ೭ ಅಥವಾ ೯ ಬಗೆಯ ಖಾದ್ಯಗಳನ್ನು ಮಾಡುವುದು ವಿಶೇಷವಾಗಿದೆ.

**ದೀಪಾವಳಿ ಹಬ್ಬ** ಈ ಭಾಗದ ಮಹಿಳೆಯರು ದೀಪಾವಳಿ ದಿನ ಗೊಟ್ಟಟ್ಟು ಮಾಡುತ್ತಾರೆ. ಸಿಹಿ ತಿಂಡಿ ಊಟವನ್ನು ವಿಶೇಷವಾಗಿ ತಯಾರಿಸುತ್ತಾರೆ.

೧. **ಶಿವರಾತ್ರಿ** ಈ ಹಬ್ಬದಲ್ಲಿ ಹಣಗು ಸುಡುವುದು ಎಂಬುವ ಆಚರಣೆ ಇದೆ. ದಿಮ್ಸಾಲ್ ಪದಗಳನ್ನು ಹಾಡುತ್ತಾರೆ. ಅನೇಕ ಮಹಿಳೆಯರು ಭಾಗವಹಿಸುತ್ತಾರೆ.

೨. **ಮೊಗವೀರ ಮಹಿಳೆಯರ ಪುರಾಣಗಳು:**

ನಮ್ಮ ಪುರಾಣಾತಿಹಾಸದಲ್ಲಿ ಬೆಸ್ತರ ಬಗೆಗೆ ಅನೇಕ ಇತಿಹಾಸಗಳು ಹುಟ್ಟಿಕೊಂಡಿದೆ. ಪುರುವಂಶದ ಉಪರಿಚರ ಎನ್ನುವ ರಾಜನು ಜಲಕ್ರೀಡೆ ಮಾಡುವಾಗ ಆತನ ವೀರ್ಯವನ್ನು ಮೀನೊಂದು ನುಂಗಿದ ಕಾರಣ ಗರ್ಭವತಿಯಾಗುತ್ತದೆ. ಅದು ಬೆಸ್ತರ ಬಲೆಗೆ ಸಿಕ್ಕಿಬಿದ್ದು ಅವರ ರಾಜನಾದ ದಾಶರಾಜನ ಬಳಿ ನೀಡುತ್ತಾರೆ. ಆ ಮೀನಿನ ಹೊಟ್ಟೆಯಲ್ಲಿ ಜನಿಸಿರುವ ಮಗುವೇ 'ಮತ್ಸ್ಯಗಂಧಿ' ಅಥವಾ ಸತ್ಯವತಿ. ಆಕೆಯು ಯುವತಿಯಾದಾಗ ಪರಾಶರ ಮುನಿಯೂ ಮೋಹಿಸುತ್ತಾರೆ. ಅವರಿಬ್ಬರಿಗೆ ಹುಟ್ಟಿದ ಮಗುವೆ ವೇದವ್ಯಾಸ. ಉಳ್ಳಾಲದ ರಾಣಿ ಅಬ್ಬಕ್ಕ ದೇವಿಯು ತುಳುನಾಡಿನ ವೀರ ಮಹಿಳೆ ಅವರಲ್ಲಿ ಬಲಿಷ್ಠವಾದ ನೌಕಾಪಡೆಯಿತ್ತು. ಅವರೆಲ್ಲರು ಬೆಸ್ತರೇ ಆಗಿದ್ದರು. ಅದರಲ್ಲಿ ಸ್ತ್ರೀಯರು ಕೂಡ ಹೆಚ್ಚಿನ ಸಂಖ್ಯೆಯಲ್ಲಿದ್ದರು ಎಂದು ಹೇಳಲಾಗುತ್ತದೆ.

೩. **ಹಾಡು ಕುಣಿತ** ಮಹಾಗಾತ್ರದ ದೋಣಿಯನ್ನು ದಡದಿಂದ ಸಮುದ್ರಕ್ಕೆ ತಳ್ಳುವಾಗ ಸಮುದ್ರದಿಂದ ದಡಕ್ಕೆ ಒಯ್ಯುವಾಗ ಶ್ರಮದ ಪರಿಹಾರಕ್ಕಾಗಿ ಅವರು ಸೃಜನದ ಉದ್ಗಾರಗಳಿಗೆ ಹಾಡಿನ ರಾಗ, ತಾಳಗಳು ಸೇರಿವೆ. ಈ ಉದ್ಗಾರಗಳಿಗೆ 'ಅಂಜಿ' ಹಾಕುವುದು ಎನ್ನುತ್ತಾರೆ. ಇದು ತಲಾತಲಾಂತರದಿಂದ ರೂಢಿಯಲ್ಲಿದೆ. ಇದಕ್ಕೆ ಕನ್ನಡ ಶಬ್ದಗಳಾಗಲಿ, ತುಳು ಶಬ್ದಗಳಾಗಲಿ ಸೇರಿಲ್ಲ. ಮೊಗವೀರರ ಪ್ರಸ್ತಾಪವೂ ತುಳುವರ ಪಾಡ್ದನಗಳಲ್ಲಿದೆ. ಅಂಥ ಪಾಡ್ದನ ಕವಿತೆಗಳ ಪಾಠ ಬೇರೆಡೆಗಳಲ್ಲಿ ಧಾರಾಳ ಉಪಲಬ್ಧವಾಗಿರುವುದರಿಂದ ಅದನ್ನು ಇಲ್ಲಿ ಸಂಗ್ರಹಿಸುವ ಸಾಹಸ ಮಾಡಲಿಲ್ಲ. ಕ್ಷೇತ್ರಕಾರ್ಯದಲ್ಲಿ ಹೊಸದಾಗಿ ದೊರೆತ **'ಜೋಗುಳ'** ಹಾಡು ಕನ್ಯೋಪದೇಶಕ್ಕೆ ಸಂಬಂಧಪಟ್ಟ ಹಾಡುಗಳನ್ನು ಮಾತ್ರ ಸೇರಿಸಿಕೊಳ್ಳಲಾಗಿದೆ. ಮೊಗವೀರ ಗರತಿಯರು ತಮ್ಮ ಬಿಡುವಿಲ್ಲದ ವೇಳೆಯಲ್ಲಿ ಭತ್ತ ಕುಟ್ಟುವ ಹಾಡುಗಳನ್ನು ಸಹ ಹೇಳುತ್ತಾರೆ. ಮೊಗವೀರರ ಚಿಂತನೆಗಳು ಸಮುದ್ರವಾದುದರಿಂದ ಸಮುದ್ರಕ್ಕೆ ಸಂಬಂಧಪಟ್ಟ ಅನೇಕ ಹೊಸ ಕಲ್ಪನೆಗಳನ್ನು ಅವರ ಸಾಹಿತ್ಯದಲ್ಲಿ ಕಾಣಬಹುದು. ಅದನ್ನು **'ಸಮುದ್ರ ಜನಪದ'** ಎಂದು ಕರೆಯುತ್ತಾರೆ. ಜನಪದ ಕವಿಯತ್ರಿಯರು ಸಮುದ್ರವನನ್ನು ಕಂಡ ರೀತಿ ತುಂಬಾ ಸುಂದರವಾಗಿದೆ. ಸಮುದ್ರದ ಭರತ-ಇಳಿತಗಳನ್ನು ಅವರು ಮನುಷ್ಯನ ಬಡತನಗಳಿಗೆ ಸೋಲು ಮತ್ತು

ಗೆಲುವುಗಳಿಗೆ ಹೋಲಿಸುತ್ತಾರೆ. ಸಮುದ ತೆರೆಗಿಂತಲೂ ಆಕರ್ಷಕವಾದುದು ನೊರೆ. ಕೆಲವರು ಹಾಲೆಂದು ಭಾವಿಸಿ ಅದನ್ನು ಬಾಚಲು ಹೋದಂತೆ ಅನೇಕರಿಗೆ ಕಡಲ ನೀರಿನ ಮಹತ್ವ ಗೊತ್ತಿಲ್ಲ ಎಂದು ಅವರು ಈ ರೀತಿಯಾಗಿ ಮರುಕ ಪಡುತ್ತಾರೆ. ಬೇರಿಲ್ಲದ ಗಿಡದಲ್ಲಿ ಬಳಿಯ ಹೂಮಾಲೆಯೆಂದೂ ಗಂಗಮ್ಮ ಜಡೆಯಲ್ಲದೇನೆ ಇಳಿಬಿಟ್ಟು ಹೂಮಾಲೆಯನ್ನು ಜೆಲ್ಲಿಯಂತೆ ವರ್ಣಿಸಲಾಗಿದೆ. ಒಬ್ಬರಿಯ ದೇವರಿಗೆ ಇಬ್ಬರು ಹೆಂಡಿರಂತೆ ನಮ್ಮ ಜನಪದ ಗರತೀಯರು ಇದನ್ನು ತುಂಬಾ ಸುಂದರವಾಗಿ ಕಟ್ಟಿದ್ದಾರೆ. ಇನ್ನೊಂದು ಮೀನಿನ ಮದುವೆಯ ಹಾಡು ಒಂದು ಪುಟ್ಟ ರೂಪಕದಂತಿದೆ. ಇಲ್ಲಿ ಮೀನು ಪ್ರಾಯಪ್ರಬುದ್ಧವಾದ ಹೆಣ್ಣಿನ ಸಂಕೇತ. ನಮ್ಮ ಮಗಳನ್ನು ಯಾರಿಗೆ ಕೊಡುವುದು ಎಂಬುದೇ ತಂದೆ-ತಾಯಂದಿರ ಸಮಸ್ಯೆ. ಅವರ ಕಣ್ಮುಂದೆ ಅನೇಕ ಗಂಡುಗಳಿದ್ದರೆ ಅವರು ಗೃಹಸ್ಥರನ್ನೂ ಬುದ್ಧಿವಂತರನ್ನು ಕರಸಿ ಪಂಚಾಯ್ತಿ ಮಾಡುವ ಸನ್ನಿವೇಶಗಳಿವೆ. ತುಳುನಾಡಿನ ಸಮುದ್ರ ಜನಪದದಲ್ಲಿ ಭಾಗದಲ್ಲಿ ಸೋಮಾರಿ ಹೆಣ್ಣೊಬ್ಬಳನ್ನು ಲೇವಡಿ ಮಾಡಲಾಗಿದೆ. ಆಕೆ ಯಾವ ಕೆಲಸಕ್ಕೂ ಸಿಗುವವಳಲ್ಲಾ ಆದರೆ ಕಂತು ಬಲೆಯ ದೋಣಿ ಬರುವಾಗ ಮಾತ್ರ ಕಡಲ ಕಿನಾರೆಯಲ್ಲಿ ಹಾಜರಿರುತ್ತಾಳೆ. ಏಕೆಂದರೆ ಆಕೆಯ ಪ್ರಿಯತಮ ಬರುತ್ತಾನೆಂದು !ಸದಾ ದುಡಿಯುವ ಮೊಗವೀರ ಕುಟುಂಬದ ಒಂದು ಸತ್ಯ ಚಿತ್ರಣವನ್ನು ತುಳು ಜೋಗುಳ ಬಿಂಬಿಸುತ್ತವೆ. ತಂದೆ ಮೀನು ತರಲು ಹೋಗುತ್ತಾನೆ. ತಾಯಿ ಮೀನು ಹೊರಲು ಹೋಗುತ್ತಾಳೆ. ಮಗುವನ್ನು ನೋಡಿಕೊಳ್ಳಲು ನೆರೆಮನೆಯಾಕೆಗೆ ತೊಟ್ಟಿಲು ತೂಗಲು ಹೇಳುತ್ತಾಳೆ. ಹೆಣ್ಣು ಗಂಡನ ಮನೆಗೆ ಹೋದಗ 'ದೇವರಲ್ಲಿ ಭಕ್ತಿಯನ್ನಿಡು' ನೆರೆಮನೆಯ ಹೆಂಗಸರನ್ನು ಅಕ್ಕ ಅಮ್ಮ ಎಂದೂ ಸಂಬೋಧಿಸುತ್ತಾ ಸ್ನೇಹದಿಂದಲೂ ಇರಬೇಕೆಂದು ಉಪದೇಶಿಸುತ್ತಾರೆ. ಹಾಡು ಹಾಡಬೇಕಾದರೆ ಒಳ್ಳೆಯ ಜೋಡಿ ಬೇಕು. ಹಾಡುಗಾರ್ತಿಯರ ಕೂಟ ಬೇಕು. ಅವರಿಗೆ ಒಳ್ಳೆಯ ಸ್ವರವೂ ಬೇಕು ಜನಪದ ಗಾಯಕಿಯರು ಹೇಳುತ್ತಾರೆ. ಮೊಗವೀರ ಮದುವೆ ಹಾಡುಗಳು ಚಪ್ಪರ ಹಾಕುವಲ್ಲಿಂದಲೇ ಆರಂಭವಾಗುತ್ತವೆ. ದಿಬ್ಬಣ ಒಳಗೆ ಬರುವಾಗ ಮದುಮಗನಿಗೆ ಮುಡಾಸು(ಪೇಂದಿ) ಕಟ್ಟುವಾಗ, ಧಾರೆಯೆರೆಯುವಾಗ, ಆರತಿ ಮಾಡುವಾಗ, ಕೊನೆಯಲ್ಲಿ ಚಿತ್ತಿಗಾರರನ್ನು ಹೊಗಳಲಿಕ್ಕೂ ಹಾಡು ಇದೆ.

**ಕಲೆಗಳು:** ಕರಾವಳಿಯಲ್ಲಿ ಅತ್ಯಂತ ಪುರಾತನ ಹಾಗೂ ಪ್ರಬುದ್ಧ ಕಲೆಗಳು ಕಂಡುಬರುತ್ತವೆ. ನಮ್ಮ ಕಡೇಕಾರಿನಲ್ಲಯೂ ಯಕ್ಷಗಾನ ಕಲೆ ಇಂದಿಗೂ ಜೀವಂತವಾಗಿದೆ. ಕರಾವಳಿಯಲ್ಲಿ ಜನಪ್ರಿಯತೆಗೊಂಡಿರುವ ಎರಡು ಮೇಳಗಳು ತೆಂಕುತಿಟ್ಟು, ಬಡಗು ತಿಟ್ಟುಗಳು, ಯಕ್ಷಗಾನ ಕಲೆಯು ಕರಾವಳಿ ಜನರ ಕಲಾತ್ಮಕ ಜೀವನದ ಉಸಿರು. ಈ ರೀತಿ ನಮ್ಮವರು ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ. ಮೊಗವೀರರು ಭಾಗವತರಾಗಿ, ಹಿಮ್ಮೇಳ ಕಲಾವಿದರಾಗಿ ಪಾತ್ರಧಾರಿಗಳಾಗಿ ಮಂಡಳಿ ಮುಖ್ಯಸ್ಥರಾಗಿದ್ದಾರೆ. ಇತ್ತೀಚಿನ ದಿನಗಳ್ಲಿ ಹೆಣ್ಣು ಮಕ್ಕಳು ಉತ್ತಮ ಪಾತ್ರದಾರಿಗಳಾಗಿ, ಉತ್ತಮ ಹಿಮ್ಮೇಳ ಕಲಾವಿದರಾಗಿ, ಭಾಗವತೆಯರಾಗಿ ಸೇವೆ ಸಲ್ಲಿಸುತ್ತಿರುವುದುನ್ನು ನಾವು ನೋಡಬಹುದಾಗಿದೆ. ಅನೇಕ ಮಹಿಳಾ ಯಕ್ಷಗಾನ ಮಂಡಳಿಗಳು ಅನೇಕ ಮಹಿಳಾ ಕಲಾ ಸಂಘಗಳು ಕರಾವಳಿಯಲ್ಲಿ

ಹುಟ್ಟಿಕೊಂಡಿವೆ. ಮದುವೆ ಸಮಯದಲ್ಲಿ ಮದರಂಗಿ ಹಚ್ಚುವಾಗ ಚಪ್ಪರ ಎಂಬ ಕಾರ್ಯಕ್ರಮವು ನಡೆಯುತ್ತದೆ. ತುಳುನಾಡಿನಲ್ಲಿ ಅದನ್ನು ಧೈಂಪಾ ಎನ್ನುವರು. ಇಲ್ಲಿ ಹೆಣ್ಣು ಮಕ್ಕಳ ವೈವಿಧ್ಯಮಯ ಹಾಡುಗಾರಿಕೆ, ನರ್ತನವಿರುತ್ತದೆ. ಮೊಗವೀರರ ಶಿಲ್ಪಕಲಾ ವೈವಿಧ್ಯವನ್ನು ಕಾಣಬೇಕಾದರೆ ಇವರ ದೇವಸ್ಥಾನಗಳಿಗೆ ಹೋಗಬೇಕು. ಇಲ್ಲಿ ದಾರು ಶಿಲ್ಪದ ಸುಂದರ ಕಲಾತ್ಮಕತೆಗಳಿವೆ. ಬಲೆಗಳನ್ನು ನೇಯುವುದು ಅದ್ಭುತ ಕಲೆ. ವಿವಿಧ ಗಾತ್ರದ ಮೀನುಗಳನ್ನು ಹಿಡಿಯುವ ಸಲುವಾಗಿ ನಾನಾ ರೀತಿಯ ಬಲೆಗಳನ್ನು ಕುಸುರಿ ಕೆಲಸದಿಂದ ಮಾಡಿರುವುದು ಅವರ ಜಾಣ್ಮೆಗೆ ಸಾಕ್ಷಿಯಾಗಿದೆ. ಮೀನಿನ ಬುಟ್ಟಿಗಳು, ಮರದ ದೋಣಿ, ಮರದ ತೊಟ್ಟು, ಮುಳುಗು ಭಾರಗಳು ಮುಂತಾದವುಗಳನ್ನು ಸುಂದರವಾಗಿ ಮೊಗವೀರರೇ ತಯಾರಿಸುತ್ತಾರೆ.

**ವೈದ್ಯಕೀಯ:**

ಮೋಗವೀರ ಮಹಿಳೆಯರು ಜನಪದ ವೈದ್ಯರೂ ಹೌದು. ಅವರು ಮುಖ್ಯವಾಗಿ ಈ ಕೆಳಗಿನ ಕಾಯಿಲೆಗಳಿಗೆ ಔಷಧಿ ತಯಾರು ಮಾಡುತ್ತಾರೆ.

೧. **ಬಾಣಂತಿಯರಿಗೆ ಔಷಧ:** ಒಣಶುಂಠಿ ಪುಡಿ ಮಾಡಿ ಬೆಲ್ಲವನ್ನು ಸೇರಿಸಿ ತಯಾರಿಸಿದ ಕಷಾಯವನ್ನು ಹೆತ್ತ ಮರುದಿನದಿಂದಲೆ ಕೊಡಲು ಆರಂಭಿಸುತ್ತಾರೆ. ಬೆಳಗ್ಗೆ ಸ್ನಾನ ಮಾಡಿ ಬಂದೊಡನೆ ಮತ್ತು ಸಂಜೆ ಸೇವಿಸುತ್ತಾರೆ.

೨. **ನೀರುಳ್ಳಿ ಹಲ್ವ:** ತೆಂಗಿನಕಾಯಿ ಹಾಲಿಗೆ ನೀರುಳ್ಳಿಯನ್ನು ಸಣ್ಣಗೆ ಕೊಚ್ಚಿ ಹಾಕಿ. ಸಾಕಷ್ಟು ವಾಲಿ ಬೆಲ್ಲ ಸೇರಿಸಿ ಚೆನ್ನಾಗಿ ಬೇಯಿಸಿ ತಯಾರು ಮಾಡಿದ ಹಲ್ವ. ಬಾಣಂತಿ ಯರಿಗೆ ಇದು ಲೋಹದಂತೆ ಪರಿಣಾಮಕಾರಿಯಾದ ಔಷಧಿಯಾಗಿದೆ.

೩. **ಬಾಣಂತಿಯರ ಊಟ:** ತೆಂಗಿನಕಾಯಿ ತುರಿ ಮತ್ತು ಜೀರಿಗೆ ಇವನ್ನು ಚೆನ್ನಾಗಿ ರುಬ್ಬಿ, ರುಚಿಗೆ ತಕ್ಕ ಬೆಲ್ಲ ಅಥವಾ ಉಪ್ಪು ಸೇರಿಸಿ ಅನ್ನದೊಡನೆ ಕಲಸಿ ಊಟ ಮಾಡಿಸುತ್ತಾರೆ. ಮರುದಿನ ತೆಂಗಿನ ಕಾಯಿ ತುರಿಗೆ ಸ್ವಲ್ಪ ಕಾಳು ಮೆಣಸು ಸೇರಿಸಿ ರುಬ್ಬಿ ಗಂಜಿಯೊಟ್ಟಿಗೆ ಬೇಯಿಸಿ ಆ ಗಂಜಿಯಲ್ಲಿ ಊಟ ಮಾಡಿಸುತ್ತಾರೆ.

೪. **ಚಾಟೆ:** ಚಾಟೆಯ ಕೊನೆ ತಿಂದರೆ ಕಣ್ಣಿನ ದೃಷ್ಟಿಗೆ ತುಂಬ ಒಳ್ಳೆಯದಂತೆ

೫. **ಬಾಣಂತಿಯರಿಗೆ ಕಂಡಿಕೆ:** ಬಾಣಂತಿಯರಿಗೆ ಮೀನು ಮತ್ತು ಒಳಮೀನು ಹಿತಕರ. ಇದಕ್ಕೆ ಸ್ವಲ್ಪ ಕಾಳು ಮೆಣಸು ಹಾಕಿ ಮೀನಿನ ಪಳ್ದ ಮಾಡಿ ಊಟ ಮಾಡಿದರೆ ಆರೋಗ್ಯಕರ.

೬. **ಕಡಲ ಹಂದಿ:** ಈ ಮೀನು ಪದಾರ್ಥವನ್ನು ಕಾಲು ಒಡೆಯುವ ಭಾಗಕ್ಕೆ ಹಚ್ಚಿದರೆ ಬೇಗ ಗುಣವಾಗುತ್ತದೆ.

೭. **ಬಂಗುಡೆ ಎಟ್ಟೆ:** ಬಾಣಂತಿಯರಿಗೆ ಪಥ್ಯ(ಹಿತಕರವಾಗಿರುತ್ತದೆ).

**ಮಾಜಕ್ಕೆ ಮೀನುಗಾರ ಮಹಿಳೆಯರ ಕೊಡುಗೆ**

ಮೀನುಗಾರ ಮಹಿಳೆಯರು ಸಮಾಜಕ್ಕೆ ಅನೇಕ ರೀತಿಯ ಕೊಡುಗೆಯನ್ನು ನೀಡಿರುತ್ತಾರೆ. ತುಳುನಾಡಿನ ಹೆಣ್ಣುಮಕ್ಕಳಾದ ಇವರು ಸಮಾಜಕ್ಕೆ ಮಾದರಿ ಹೆಣ್ಣುಗಳಾಗಿ ಬದುಕುತ್ತಿದ್ದಾರೆ.

೧. **ಶ್ರಮ ಜೀವನ:** ಅತ್ಯಂತ ಶ್ರಮ ಜೀವಿಗಳಾದ ಮೊಗವೀರ ಗರತಿಯರು ದೈನಂದಿನ ಚಟುವಟಿಕೆಯ ಮೂಲಕ ಸಮಾಜಕ್ಕೆ ಮಾದರಿಯಾಗಿ ಬದುಕುತ್ತಿರುವುದು ನಮ್ಮೆಲ್ಲರಿಗೂ ಗೊತ್ತಿರುವ ವಿಷಯ. ಮೀನಿನ ಗುಣ ಸ್ವಭಾವಗಳ ಬಗ್ಗೆ ಸಾಕಷ್ಟು ಅಧ್ಯಯನ ಮಾಡಿರುವ ಮೊಗವೀರ ಗರತಿಯರು ಸಮಾಜದಲ್ಲಿಯೂ ಹೇಗಿರಬೇಕು ಎಂಬುವ ಸ್ವಾರಸ್ಯವನ್ನು ಬಲ್ಲವರು ಅವಿರತವಾದ ಶ್ರಮ ಜೀವನ ಅವರಿಗೆ ಹಸರನ್ನು ಕೊಟ್ಟಿದೆ. ಸಮಾಜದಲ್ಲಿ ಉತ್ತಮ ಸ್ಥಾನಮಾನವೂ ಸಿಕ್ಕಿದೆ. ಒಂದು ಇಡೀ ಮನೆಯನ್ನು ಜವಾಬ್ದಾರಿಯುತವಾಗಿ ಹೇಗೆ ಮುನ್ನಡೆಸಿಕೊಂಡು ಹೋಗಬೇಕು ಎಂಬುದನ್ನು ಎಳೆ ಎಳೆಯಾಗಿ ತಿಳಿಸಿಕೊಟ್ಟಿದ್ದಾರೆ. ಇತರ ಸಮಾಜದ ಮಹಿಳೆಯರಿಗೆ ಮಾದರಿಯಾಗಿ ಬದುಕುತ್ತಿದ್ದಾರೆ.

೨. **ಸಹಬಾಳ್ವೆ:** ಶಾಂತಿ ಸಹಬಾಳ್ವೆ ನೀತಿ ಪಾಠಗಳನ್ನು ನಾವು ಮೋಗವೀರ ಮಹಿಳೆಯರಿಂದ ಕಲಿಯಬೇಕು. ತಮ್ಮ ವೃತ್ತಿಯನ್ನು ಎಷ್ಟು ಜನ ಹೆಣ್ಣುಮಕ್ಕಳು ಬಂದರೂ ಸ್ವೀಕರಿಸುತ್ತಾರೆ. ಯಾವುದೇ ತಾರತಮ್ಯವಿಲ್ಲದೆ ಪ್ರೀತಿಯಿಂದ ವ್ಯವಹರಿಸುತ್ತಾರೆ. ಸ್ವಪ್ರೇರಣೆಯಿಂದ ಕಾರ್ಯದಕ್ಷತೆಯಿಂದ ಎಲ್ಲರೊಂದಿಗೆ ವ್ಯವಹಾರ ಮಾಡುತ್ತಾರೆ. ಎಲ್ಲಾ ರೀತಿಯ ಗ್ರಾಹಕರನ್ನು ಸ್ವೀಕರಿಸುತ್ತಾರೆ. ಯಾವುದೇ ಜಾತಿಯ, ಯಾವುದೇ ಧರ್ಮದವನಾದರೂ ಇಲ್ಲಿ ಯಾವುದೇ ತಾರತಮ್ಯವಿಲ್ಲದೆ ಸೌಹಾರ್ದದಿಂದ ಸಮಾನವಾಗಿ ಬದುಕುತ್ತಾರೆ. ಮಕ್ಕಳೊಂದಿಗೆ, ಹಿರಿಯರೊಂದಿಗೆ, ನೆರೆಮನೆಯವರೊಂದಿಗೆ, ಬಂಧುಗಳೊಂದಿಗೆ, ಗಂಡನೊಂದಿಗೆ, ಸಮಾಜದವರೊಂದಿಗೆ ಎಲ್ಲರೊಂದಿಗೆ ಸ್ನೇಹದಿಂದಿರುತ್ತಾರೆ.

೩. **ಧೈರ್ಯ ಮತ್ತು ಛಲ:** ಮೋಗವೀರ ಮಹಿಳೆಯರಲ್ಲಿ ಶ್ರೀಮಂತವಾಗಿರುವ ಸಂಪತ್ತು ಅಂದರೆ ಧೈರ್ಯ ಮತ್ತು ಛಲ. ಎಂತಹ ಜವಾಬ್ದಾರಿಯನ್ನಾದರೂ ಸರಾಗವಾಗಿ ಮುಂದೆ ನಡೆಸಿಕೊಂಡು ಹೋಗವ ಅದರಲ್ಲಿ ಬರುವ ತೊಡಕುಗಳನ್ನು ನಿವಾರಣೆ ಮಾಡಿಕೊಂಡು ಗಟ್ಟಿ ಧೈರ್ಯದಿಂದ ಮುನ್ನುಗ್ಗುತ್ತಾರೆ. ಅವರ ವ್ಯಾಪಾರ ಸಂಸ್ಕೃತಿ, ಆಚಾರ-ವಿಚಾರಗಳು, ಸಮಾಜಕ್ಕೆ ಮಾರ್ಗ ದೀವಿಗೆಯಾಗಿದೆ. ಮೊಗವೀರ ಮಹಿಳೆಯರು ಕೇವಲ ಕೈಂಕರ್ಯದಲ್ಲಿ ಅಲ್ಲದೆ ಸಮಾಜದ ಹಿತಾಸಕ್ತಿಗಳಲ್ಲಿಯೂ ಧೈರ್ಯ ಮತ್ತು ಶ್ರಮ ಹಾಕುತ್ತಾರೆ. ಮಹಿಳಾ ಶೋಷಣೆ, ಬಾಲಕಾರ್ಮಿಕ ಪದ್ಧತಿ, ಒಳ ಜಗಳ, ಹಿಂಸೆಗಳ ವಿರುದ್ಧ ಧ್ವನಿ ಎತ್ತುತ್ತಾರೆ.

೪. **ಮಕ್ಕಳ ಶಿಕ್ಷಣ:**

ತನ್ನ ಎಲ್ಲ ಬೇಕು ಬೇಡಗಳಿಗಿಂತಲೂ ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಒತ್ತನ್ನು ಮೊಗವೀರ ಮಹಿಳೆಯರು ನೀಡುತ್ತಿದ್ದಾರೆ. ಇವರ ಮೂಲಕ ಊರಿನಲ್ಲಿರುವ ಇತರ ಸಮುದಾಯದ ಮಹಿಳೆಯರು ತಮ್ಮ ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡುತ್ತಿದ್ದಾರೆ.

**ಪ್ರಸ್ತುತ ಸಂದರ್ಭದಲ್ಲಿ ಮೀನುಗಾರ ಮಹಿಳೆಯರ ಸ್ಥಾನಮಾನ**

ಕಡೇಕಾರು ಗ್ರಾಮದಲ್ಲಿ ಪ್ರಸ್ತುತ ಸಂದರ್ಭದಲ್ಲಿ ಮೊಗವೀರ ಮಹಿಳೆಯ ಸ್ಥಾನಮಾನ ಉನ್ನತೀಕರಣಗೊಂಡಿದೆ. ಅವರು ಪ್ರಬುದ್ಧರಾಗುತ್ತಿದ್ದಾರೆ. ಮೊಗವೀರ ಸಮುದಾಯದಲ್ಲಿ ಗಂಡಸರು, ಹೆಂಗಸರನ್ನು ಗೌರವದಿಂದ ನೋಡುತ್ತಾರೆ. ಮಹಿಳೆ ಇಲ್ಲಿ ಪ್ರಧಾನ ಸ್ಥಾನವನ್ನು ಹೊಂದಿರುತ್ತಾಳೆ. ಮನೆಯ ಎಲ್ಲ ಬೇಕು ಬೇಡಗಳಿಗೆ ಆಕೆ ಸ್ಪಂದಿಸುತ್ತಾಳೆ. ಗ್ರಾಮಪಂಚಾಯಿತಿಯಲ್ಲಿ ಅನೇಕ ಮಹಿಳೆಯರು ವಾರ್ಡ್ ಸದಸ್ಯರಾಗಿರುತ್ತಾರೆ. ತಮ್ಮ ತಮ್ಮ ವಾರ್ಡ್‌ನಲ್ಲಿ ಬರುವ ಎಲ್ಲಾ ಸಮಸ್ಯೆಗಳನ್ನು ನಿಭಾಯಿಸುತ್ತಾರೆ. ಸರಕಾರ ಮೀಸಲಾತಿ ಕೊಡಲಿ ಬಿಡಲಿ ಮೊಗವೀರ ಸಮುದಾಯಗಳು ಸಾವಿರಾರು ವರ್ಷಗಳ ಮೊದಲೇ ಮಹಿಳೆಯರಿಗೆ ಸ್ಥಾನಮಾನ ನೀಡಿದೆ. ಮೊಗವೀರ ಮಹಿಳೆಯರು ತುಂಬಾ ಉನ್ನತ ಮಟ್ಟದಲ್ಲಿ ವ್ಯಾಸಂಗ ಮಾಡಿಕೊಳ್ಳುತ್ತಿದ್ದಾರೆ. ಇತರರಿಗೆ ಮಾದರಿಯಾಗಿ ಬದುಕುತ್ತಿದ್ದಾರೆ. ಅಸ್ಪೃಶ್ಯತೆ ಆಚರಿಸದೆ ಮಹಿಳೆಯರಿಗೆ ಪ್ರಥಮ ಆದ್ಯತೆ ನೀಡುತ್ತಾ ಬಂದಿದ್ದಾರೆ. ಮನೆಯ 'ಹೆಣ್ಣಾಗಲಿ ಅಥವಾ ಗಂಡಾಗಲಿ' ಭೇದ ಇವರಲಿಲ್ಲ. ದೇವರ ಮೇಲೆ ಅತೀಯಾದ ನಂಬಿಕೆ ಹಿರಿಯರ ಮೇಲೆ ಬಹಳಷ್ಟು ಗೌರವ. ಕೆಳಜಾತಿ ಯವರೊಂದಿಗೆ ಸಂಪರ್ಕ ಕಡಿಮೆ. ಆದರೆ ತಾತ್ಸರವಿಲ್ಲ. ದುಡಿಮೆಯ ಅಂಗಳದಲ್ಲಿ ಭೇದ ಮಾಡುವುದಿಲ್ಲ. ಅವರು ಮಾಡಿದ ಅಡುಗೆಯನ್ನು ಸೇವನೆ ಮಾಡುವುದಿಲ್ಲ ಅಷ್ಟೆ. ಕಡೇಕಾರು ಗ್ರಾಮದ ಮುಖ್ಯವಾಹಿನಿಯಲ್ಲಿ ಮಹಿಳೆಯರೇ ಇದ್ದಾರೆ ಎನ್ನಲು ಹೆಮ್ಮೆಯಾಗುತ್ತದೆ.

**ಕಡೇಕಾರು ಮಹಿಳೆಯರು ಇತರ ಮಹಿಳೆಯರಿಗೆ ನೀಡುವ ಸಲಹೆಗಳು**

೧. ಸಮಾಜದಲ್ಲಿ ಸ್ಪರ್ಧೆ ನೀಡಲಿಕ್ಕೆ ದುಡಿಮೆ ಮಾಡಬೇಕು. ನೀವು ನಿಮ್ಮ ಸ್ವಾವಲಂಬಿತನವನ್ನು ಉಳಿಸಿಕೊಳ್ಳಲು ದುಡಿಮೆ ಮಾಡಿ.

೨. ಗಟ್ಟಿತನ ಎನ್ನುವುದು ಒಮ್ಮೆಗೆ ಬರುವಂತದಲ್ಲ. ಅದು ನಿರಂತರ ಸಮಸ್ಯೆಗಳನ್ನು ಎದುರಿಸುತ್ತಾ ಹೋದ ಹಾಗೇ ಜಾಗೃತವಾಗುತ್ತದೆ.

೩. ನಮ್ಮ ಗುರಿ, ಸ್ಪಷ್ಟವಾದ ನಿಲುವುಗಳೇ ನಮ್ಮನ್ನು ಯಶಸ್ಸಿನ ಹಾದಿಯಲ್ಲಿ ಕರೆದುಕೊಂಡು ಹೋಗುತ್ತದೆ.

೪. ನಮ್ಮ ಮಕ್ಕಳು, ನಮ್ಮ ಮನೆ, ನಮ್ಮ ಕುಟುಂಬವನ್ನು ನಾವೇ ಸರಿಯಾದ ರೀತಿಯಲ್ಲಿ ನಿರ್ವಹಣೆ ಮಾಡೋಣ, ಸುಂದರವಾದ ಜೀವನ ನಮ್ಮೆಲ್ಲರದಾಗಲಿ ಎಂಬುದು ಈ ಮಹಿಳೆಯರ ಆಶಯ.

## ಅಧ್ಯಾಯ-೫

## ಸಮಾರೋಪ

ಕಡೇಕಾರು ಗ್ರಾಮದ ಮೋಗವೀರ ಮಹಿಳೆಯರ ಬದುಕು ವಿವಿಧ ಕಾಲಘಟ್ಟಗಳಲ್ಲಿ ಬೇರೆಬೇರೆ ರೀತಿಯ ಸುಧಾರಣೆಗಳನ್ನು ಹಾಗೂ ಅಭಿವೃದ್ಧಿಯನ್ನು ಕಂಡಿದೆ. ನಿಸರ್ಗದಿಂದ ಹೇರಳವಾಗಿ ದೊರಕುವ ಮತ್ಸ್ಯಸಂಪತ್ತಿನಲ್ಲಿ ಏರುಪೇರು ಸಂಭವಿಸಿದಾಗ ಬದುಕು ಸ್ವಲ್ಪ ಕಷ್ಟವೆನಿಸುತ್ತದೆ. ಸಹಜವಾಗಿ ಒಮ್ಮೆ ಅಧಿಕ ಸಂಪಾಧನೆ ಮತ್ತೊಂದು ದಿನ ಕಡಿಮೆ ಸಂಪಾಧನೆ, ಎಲ್ಲದಕ್ಕೂ ಹೊಂದಿಕೊಂಡಿದ್ದಾರೆ.ಮೊದಲಿಗೆ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಸೌಕರ್ಯಗಳಿರಲಿಲ್ಲ. ಹೊಟ್ಟೆ ಪಾಡು ನೆಡೆಸಲು ಮಾತ್ರ ಬದುಕುತ್ತಿದ್ದರು. ಕಷ್ಟವೋ ಸುಖವೋ ಸ್ವ-ಉದ್ಯೋಗದಲ್ಲಿಯೆ ಅಂಟಿಕೊಂಡಿದ್ದರು. ಈಗ ಕಾಲ ಬದಲಾಗಿದೆ, ಉದ್ಯೋಗದ ಅನ್ವೇಷಣೆ ನೆಡೆಯುತ್ತಿದೆ. ಕೆಲವರು ಕೃಷಿಕರಾಗಿದ್ದಾರೆ, ಕೆಲವರು ವ್ಯಾಪಾರಿಗಳಾಗಿದ್ದಾರೆ, ಇನ್ನೂ ಕೆಲವರು ಉದ್ಯೋಗಕ್ಕಾಗಿ ಬೇರೆ ಬೇರೆ ಊರುಗಳಿಗೆ ಪಯಣ ನೆಡೆಸುತ್ತಿದ್ದಾರೆ. ಶೈಕ್ಷಣಿಕವಾಗಿ ಗಮನಿಸಿದಾಗ ಅಲ್ಲಲ್ಲಿ ಶಾಲೆಗಳು, ಖಾಸಗಿ ಸಂಸ್ಥೆಗಳು ಕಲಿಯುದಕ್ಕೆ ಉತ್ತೇಜನ ನೀಡುತ್ತವೆ. ಅನೇಕ ಮಹಿಳೆಯರು ನಾನಾ ಉದ್ಯೋಗಗಳಲ್ಲಿ ಉನ್ನತ ದರ್ಜೆಯಲ್ಲಿ ವಿದ್ಯೆ ಕಲಿತು ಕೆಲಸ ಮಾಡುತ್ತಿದಾರೆ. ಗ್ರಾಮೀಣ ಮಹಿಳೆಯರು ಸಿಗಡಿ ಮೀನನ್ನು ಹೆಚ್ಚು ಮಾರುತ್ತಾರೆ, ಇದು ಅವರಿಗೆ ಹೆಚ್ಚಿನ ಲಾಭ ತಂದುಕೊಟ್ಟಿದೆ. ವಿದೇಶಿ ವ್ಯಾಪಾರಗಳಲ್ಲಿ ಒಳ್ಳೆಯ ಮಾರುಕಟ್ಟೆ ಪಡೆದುಕೊಂಡಿದೆ. ಮಹಿಳೆಯರು ಮಾರುವ ಇತರೆ ಮೀನುಗಳು ಬೊಂಡಾಸ್(ಸ್ಕ್ವಿಡ್), ಬಿಳಿಮಾಂಜಿ, ಅರ್ಕೋಳಿ(ಅರ್ಕಾಲ್) ಕೂಡ ಹೆಚ್ಚಿನ ಸಂಖ್ಯೆಯಲ್ಲಿ ಲಾಭದಾಯಕವಾಗಿದೆ. ಮಲ್ಪೆಯಲ್ಲಿ ಉತ್ತಮವಾದ ಮೀನು ಸಂಸ್ಕರಣ ಕೇಂದ್ರಗಳಿವೆ. ದುರ್ಬಲ ವರ್ಗಕ್ಕೆ ಉದಾರಸೇವೆ ನೀಡುವ ಪ್ರಸಿದ್ಧವಾದ ಮೋಗವೀರ ಮಹಿಳಾ ಸಂಘಟನೆಗಳನ್ನು ಸೇರಿಕೊಂಡು ಸರ್ವತೋಮುಖ ಪ್ರಗತಿಗಾಗಿ ದುಡಿಮೆ ಮಾಡುತ್ತಿದ್ದಾರೆ.

ಕಡೇಕಾರು ಗ್ರಾಮದಲ್ಲಿ ಹಿಂದೆ ಬಾಲ್ಯವಿವಾಹ ಪದ್ಧತಿ, ತೊಟ್ಟಿಲು ಮದುವೆಗಳು ರೂಢಿಯಲ್ಲಿದ್ದವು. ಈಗ ಬುದ್ಧಿ ಜೀವಿಗಳು ಅದನ್ನು ತಡೆದು ಸಮಾಜಕ್ಕೆ ಹೊಸ ಬದುಕನ್ನು ಜೋಡಿಸಿದ್ದಾರೆ. ವರದಕ್ಷಣೆ ಮುಂತಾದ ಸಾಮಾಜಿಕ ಅನಿಷ್ಟಗಳನ್ನು ನಿರ್ಬಂಧಿಸಿದ್ದಾರೆ. ಮೋಗವಿರರು ಮೊದಲಿನಿಂದಲೂ ಕೋರ್ಟು ವ್ಯವಹಾರಗಳಿಗೆ ಶರಣರಲ್ಲ, ಸಮಾಜದ ಮುಖ್ಯಸ್ಥರು ಸೇರಿ ಏನೇ ಸಮಸ್ಯೆಗಳು ಬಂದರೂ ತೀರ್ಮಾನ ಮಾಡುತ್ತಾರೆ. ನಮ್ಮ ವನಿತೆಯರು ಆಂತರಿಕ ವಿವಾದಗಳನ್ನು ಅಲ್ಲಲ್ಲೆ ನಿವಾರಿಸಿ ನೆಮ್ಮದಿಯ ಬದುಕಿಗೆ ಇಂಬು ನಿಡುತ್ತಾ, ಇತರ ಮಹಿಳೆಯರಿಗೆ ಆದರ್ಶ ಮೌಲ್ಯಗಳನ್ನು ದಾರೆಯೆರೆಯುತ್ತಿದ್ದಾರೆ. ಕರ್ನಾಟಕ ರಾಜ್ಯವು ೩೨೦ ಕಿ.ಮೀ ಉದ್ದದ ಕರಾವಳಿ ತೀರದೊಂದಿಗೆ ೨೭,೦೦೦ ಚದರ ಮೀ ಪ್ರದೇಶ ೫.೬೫. ಕಿ.ಮೀ ಗುಡ್ಡಗಾಡು, ವಿವಿಧ ಒಳನಾಡು ಜಲಸಂಪನ್ಮೂಲಗಳನ್ನು ಹೊಂದಿದ್ದು ಮೀನುಗಾರಿಕೆಗೆ ವಿಫುಲ ಅವಕಾಶ ವಿರುತ್ತದೆ. ಜೊತೆಗೆ ೮೦೦ ಹೆಕ್ಟೇರ್‌ನಷ್ಟು ಓನ್ನಿರು ಪ್ರದೇಶವು ಸಿಗಡಿಮೀನು ಕೃಷಿಗೆ ಒಳ್ಳೆಯ ಅವಕಾಶ ಹೊದಗಿಸಿದೆ. ರಾಜ್ಯದಲ್ಲಿ ಸುಮಾರು ೯.೬೧ ಲಕ್ಷ

ಮೀನುಗಾರರಿದ್ದು ಕರಾವಳಿಯಲ್ಲಿ ೩.೬೮ಲಕ್ಷ, ಒಳನಾಡಿನಲ್ಲಿ ೬.೩೩ ಲಕ್ಷ ಮೀನುಗಾರರು ವಿವಿಧ ಮೀನುಗಾರಿಕೆಯ ಚಟುವಟಿಕೆಗಳಲ್ಲಿ ತೋಡಗಿಸಿಕೊಂಡಿದ್ದಾರೆ.

ರಾಜ್ಯದ ೨೦೧೩–೧೪ನೇ ಸಾಲಿನ ಒಟ್ಟು ಮೀನು ಉತ್ಪಾದನೆಯಲ್ಲಿ ಶೇಕಡ ೨೫.೮ ರಷ್ಟಾಗಿದೆ. ರಾಷ್ಟದ ಮೀನು ಉತ್ಪಾದನೆಗೆ ಹೋಲಿಸಿದಾಗ ಕರ್ನಾಟಕವು ಕರಾವಳಿ ಮೀನು ಉತ್ಪಾದನೆಯಲ್ಲಿ ೭ನೇ ಸ್ಥಾನ ಮತ್ತು ಒಳನಾಡು ಮೀನು ಉತ್ಪಾದನೆಯಲ್ಲಿ ೬ನೇ ಸ್ಥಾನ ಪಡೆದಿದೆ. ಕರ್ನಾಟಕದ ಮೀನುಗಾರಿಕೆ ಒಂದು ಸಂಕ್ಷಿಪ್ತ ನೋಟವನ್ನು ನೋಡಿದಾಗ ಸಾಂಪ್ರದಾಯಿಕ ದೋಣಿಗಳು ಹಾಗೂ ಬಲೆಗಳ ಉಪಯೋಗ, ಯೋಜನೆಯ ಸಹಕಾರ ಒಳನಾಡಿನ ಮೀನುಗಾರಿಕೆ, ಮೀನುಗಾರಿಕೆಗೆ ಉದ್ಯೋಗವಕಾಶ ಅವರ ಸಾಮಾಜಿಕ, ಆರ್ಥಿಕ ಜೀವನ ಎಲ್ಲವನ್ನು ಅಂದಾಜಿಸಬಹುದು. ದಕ್ಷಿಣ ಕರಾವಳಿ ಜಿಲ್ಲೆಗಳಾದ ನಮ್ಮ ಉಡುಪಿ ಮತ್ತು ದಕ್ಷಿಣಕನ್ನಡ ಜಿಲ್ಲೆಗಳು ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿವೆ. ಮೀನುಗಾರಿಕೆಯನ್ನು ನಂಬಿ ಹಲವಾರು ಕುಟುಂಬಗಳು ಜೀವನವನ್ನು ನೆಡೆಸುತ್ತಿವೆ. ಸಮುದ್ರವನ್ನು ಗೌರವಿಸುವ ಹಾಗೂ ಪೂಜಿಸುವ ಮೀನುಗಾರ ಕುಟುಂಬಗಳು ಸಮುದ್ರದ ಮೇಲೆ ಸಂಪೂರ್ಣ ಅವಲಂಬಿತವಾಗಿವೆ. ಈ ಕುಟುಂಬಗಳನ್ನು ಬಂಗುಡೆ, ಭೂತಾಯಿ, ಸೀಗಡಿ, ಕಾಣೆ, ಮಾಂಜಿ, ಅಂಜಾಲ್, ಕೇದೆಲ್, ಮಾದಿಮ್ಮಾಳ್, ಬಲ್ಲಾರ್, ತೋರ್ಕೆ.ತಡೆ, ಬೊಲ್ಲೆಂಜೀರ್, ಕೊಲ್ಲಿತರು(ಮೂಳಿ) ಕಲ್ಲೂರು(ಉರಿಕಲ್ಲು) ಕೊಡ್ವಾಯಿ, ಮುಂತಾದ ಮೀನುಗಳನ್ನು ಸಮುದ್ರವಲ್ಲಿ ಹಿಡಿದು ಅವುಗಳನ್ನು ಮಾಡುವುದರ ಮೂಲಕ ಬದುಕು ಸಾಗಿಸುತ್ತಿವೆ.

ಆರಂಭದಲ್ಲಿ ನಾಡ ದೋಣಿಗಳಲ್ಲಿ, ನಂತರ ಯಾಂತ್ರಿಕ ದೋಣಿಗಳಲ್ಲಿ ಮೀನು ಹಿಡಿಯುತ್ತಿದ್ದರು. ಇಲ್ಲಿ ಮೀನು ಹಿಡಿಯುವವರನ್ನು ಮೋಗಪೀರರು ಎಂದೂ ಕರೆಯುತ್ತಿದ್ದರು. ಕರ್ನಾಟಕದಲ್ಲಿ ಬೆಸ್ತರನ್ನು ಮೋಗವೀರರು, ಮರಕಾಲರು, ಪಟ್ಟದವರು, ಬೋವಿಯ, ನಾಯಕರು.(ನಾವಿಕರು), ಗಂಗಾಮತಸ್ಥರು, ಅಂಬಿಗರು, ಖಾರ್ವಿ, ಮುಂತಾದ ನಾಮಧೇಯಗಳಿಂದ ಗುರುತಿಸುತ್ತಾರೆ. ಪಶ್ಚಿಮ ಅರಬ್ಬೀ ಸಮುದ್ರವು ತುಳುನಾಡಿನ ಮೋಗವೀರರಿಗೆ ವರದಾನವಾಗಿದೆ. ಅನೇಕ ಬಂದರು ಪಟ್ಟಣಗಳ ಹುಟ್ಟಿಗೂ ಕಾರಣವಾಗಿವೆ. ಮತ್ಸ್ಯೋದ್ಯಮದಲ್ಲಿ ಅತ್ಯಂತ ಪ್ರಗತಿ ಸಾಧಿಸಿದ ಜಿಲ್ಲೆಗಳಿವು. ಸಮುದ್ರ ಮೀನುಗಾರಿಕೆ, ಸಂಸ್ಕರಣ ಕೈಗಾರಿಕೆಗಳು ಇಲ್ಲಿ ಹೆಸರುವಾಸಿಯಾಗಿವೆ. ಕೊಚ್ಚಿ, ಮುಂಬೈಗಳ ಹಾಗೇ ಸಮುದ್ರೋತ್ಪನ್ನಗಳನ್ನು ವಿದೇಶಕ್ಕೆ ರಫ್ತು ಮಾಡುವ ಮೂಲಕ ಹೇರಳವಾದ ಧನ ಸಂಪಾದನೆ ಸಾಧ್ಯವಾಯಿತು. ಹಿಂದಿನ ಕಾಲದಲ್ಲಿ ಕರಾವಳಿ ಮೀನುಗಾರರು ದೊಡ್ಡದಾದ ಮಾರಿಬಲೆಯ ಮೂಲಕ ಮೀನುಗಳನ್ನು ಹಿಡಿದು ಸಂಸ್ಕರಣ ಕೇಂದ್ರ(ಕಮನ್ ಅಥವ ಕವಣೆ)ದಲ್ಲಿಡುತ್ತಿದ್ದರು. ಈಗ ಹಲವಾರು ಮೀನು ಸಂಸ್ಕರಣ ಘಟಕಗಳು ಇಲ್ಲಿವೆ. ಹಿಂದೆ ಮೀನುಗಳಿಗೆ ಉಪ್ಪು ಸೇರಿಸಿ ಚನ್ನಾಗಿ ಒಣಗಿಸಿ, ಜೊಪಾನವಾಗಿಡುತ್ತಿದ್ದರು.

ಕರಾವಳಿಯ ಮೀನುಗಾರ ಕುಟುಂಬವೊಂದರಲ್ಲಿ, ವರಮಾನ ಮಟ್ಟವು ಆ ಕುಟುಂಬದ ಮಹಿಳೆಯೊಬ್ಬಳು ಮನೆಯ ಹೊರಗೆ ದುಡಿಮೆ ಮಾಡುವುದರಿಂದ ಉತ್ತಮಗೊಳ್ಳುತ್ತದೆ. ವರಮಾನದ ವರ್ಧನೆಗೆ ಮಹಿಳೆಯೊಬ್ಬಳ ಮನೆಯ ಹೊರಗಿನ ದುಡಿಮೆಯು ಒಂದು ಸಾಧನ. ಮೀನುಗಾರ ಕುಟುಂಬದಲ್ಲಿ ಗೃಹಿಣಿಯು ಆಕೆಯ ಮಕ್ಕಳ, ಗಂಡನ ಮತ್ತು ಕುಟುಂಬದ ಔನ್ನತ್ಯದಲ್ಲಿ ಲೀನವಾಗಿ ಹೋಗಬಾರದೆಂಬ ದೃಷ್ಟಿಯಿಂದ ಹೊರಗಿನ

ದುಡಿಮೆಗೆ ಆಕೆಯನ್ನು ಪ್ರೋತ್ಸಾಹಿಸಲಾಗಿದೆ. ಮಹಿಳೆ ಒಂದು ರೀತಿಯ ವ್ಯಕ್ತಿತ್ವವನ್ನು ತಂದು ಕೊಡುವ ದೃಷ್ಟಿಯಿಂದ ಅವಳ ಕರ್ತವ್ಯದ ಪಾತ್ರದ ನಿರ್ವಹಣೆಗೆ ಅವಕಾಶವನ್ನು ಮಾಡಿಕೊಡುತ್ತಾರೆ. ಹೀಗೆ ಧಾರಣ ಸಾಮರ್ಥ್ಯ ಸಂಬಂಧಿ ದೃಷ್ಟಿಕೋನವು ನೀಲಿ-ನಿರೂಪಣೆಯ ದೃಷ್ಟಿಯಿಂದ ಹೆಚ್ಚು ಉಪಯುಕ್ತವಾದುದು. ಮೋಗವೀರರ ಮಹಿಳೆಯ ದುಡಿಮೆಯಲ್ಲಿ ಸಮಾನತೆಯನ್ನು ಮೀನು ಮಾರಾಟ ಕ್ಷೇತ್ರದಲ್ಲಿ ನೋಡಬಹುದು. ಉಡುಪಿ ಜಿಲ್ಲೆಯು ಆರ್ಥಿಕ ಚಟುವಟಿಕೆಗಳಲ್ಲಿ ಅದರಲ್ಲಿಯೂ ಮೀನು ಮಾರಾಟ ಕ್ಷೇತ್ರದಲ್ಲಿ ಮಹಿಳೆಯರು ಗಮನಾರ್ಹ ಸ್ಥಾನ ಪಡೆದುಕೊಂಡಿದ್ದಾರೆ. ಈ ಜಿಲ್ಲೆಯು ಪಾರಂಪರಿಕವಾಗಿ ಮೀನುಗಾರಿಕೆಗೆ ಹೆಸರಾಗಿದ್ದು, ಉಡುಪಿ ಬಳಿ ಇರುವ ಮಲ್ಪೆಯಲ್ಲಿ ಆಧುನಿಕ ಯಂತ್ರಚಾಲಿತ ಮೀನುಗಾರಿಕೆ ವೈಜ್ಞಾನಿಕವಾಗಿದೆ.

ಕಡೇಕಾರು ಗ್ರಾಮವು ಮಲ್ಪೆ ಕರಾವಳಿಯಿಂದ ಮೂರು ಕಿ. ಮೀ ದೂರದಲ್ಲಿದೆ. ಈ ಗ್ರಾಮ ಪಂಚಾಯತ್ ವ್ಯಾಪ್ತಿಗೆ ಸುಮಾರು ನೂರರಿಂದ ನೂರಾಐವತ್ತು ಮಂದಿ ಮೀನು ಮಾರಾಟ ಮಾಡುವ ಮಹಿಳೆಯರು ಬರುತ್ತಾರೆ. ದುಡಿಯುವ ಮಹಿಳೆಯರಿಗೆ ಈ ಭಾಗದಲ್ಲಿ ಪ್ರೋತ್ಸಾಹವಿದೆ. ಸಂಘ-ಸಂಸ್ಥೆಗಳಿಂದ ಬ್ಯಾಂಕುಗಳಿಂದ ಅನೇಕ ರೀತಿಯ ಸಹಾಯಹಸ್ತಗಳು ಒದಗಿಬಂದಿವೆ. ಪ್ರಗತಿಪರ ಚಿಂತನೆಗಳಿಗೆ ಅನೇಕ ಯೋಜನೆಗಳಿಂದ ಸಹಾಯ ಸಿಕ್ಕಿದೆ. ಮೋಗವೀರ ಮಹಿಳೆಯರು ಮೀನು ಮಾರಾಟ ಮಾಡುವುದರಲ್ಲಿ ಪ್ರವೀಣರು. ಅವರ ಮಾತುಗಾರಿಕೆಯ ಚಾತುರ್ಯಕ್ಕೆ ಎಂತಹ ಜಿಪುಣ ಗ್ರಾಹಕನು ವ್ಯಾಪಾರ ಮಾಡಿಹೋಗುತ್ತಾನೆ. ಅವರ ಭಾಷಾಚಾತುರ್ಯತೆ ಮತ್ತು ಕಾರ್ಯದಕ್ಷತೆ ಮೆಚ್ಚುವಂತದ್ದು. ಮುಖ್ಯ ವಾಹಿನಿಯಲ್ಲಿರುವ ಹೆಚ್ಚಿನ ಸಮುದಾಯಗಳಿಗೆ ಹೋಲಿಸಿದರೆ ನಮ್ಮ ಮಹಿಳೆಯರು ತುಂಬಾ ಅಭಿವೃದ್ಧಿ ಹೊಂದಿದ್ದಾರೆಂದು ಹೇಳಬಹುದು. ಈ ಭಾಗದ ಮಹಿಳೆಯರ ಸಾಮಾಜಿಕ ಸ್ಥಿತಿಗತಿ ಉತ್ತಮವಾಗಿರುತ್ತದೆ. ಕುಟುಂಬದಲ್ಲಿ ಆಕೆಯ ಸ್ಥಾನ-ಮಾನ ಉನ್ನತ ಮಟ್ಟದಲ್ಲಿದೆ. ಕಡೇಕಾರು ಗ್ರಾಮದಲ್ಲಿ ಮಹಿಳೆಯರು ಕೆಲವೊಂದು ಸಂಘ-ಸಂಸ್ಥೆಗಳಲ್ಲಿ ಭಾಗವಹಿಸಿಕೊಂಡು ಶಿಕ್ಷಣವಷ್ಟೇ ಅಲ್ಲದೇ, ಧಾರ್ಮಿಕ ವಲಯ, ರಾಜಕೀಯ ವಲಯ, ಸಾಮಾಜಿಕ ವಲಯದಲ್ಲಿ ಪ್ರಗತಿ ಸಾಧಿಸಿದ್ದಾರೆ. ಜೀವನಾವರ್ತನ ಆಚರಣೆಗಳಲ್ಲಿ ಮಹಿಳೆಯು ಮುಖ್ಯ ಪಾತ್ರವಹಿಸುತ್ತಿದ್ದಾಳೆ. ಹುಟ್ಟಿನಿಂದ ಸಾವಿನ ವರೆಗಿನ ಎಲ್ಲಾ ಆಚರಣೆಗಳಲ್ಲಿ ಮಹಿಳೆಯರು ಕೇಂದ್ರಬಿಂದು ಆಗಿರುತ್ತಾರೆ. ಆರ್ಥಿಕತೆಯಲ್ಲಿಯೂ ಮಹಿಳೆಯರು ಮುಖ್ಯಪಾತ್ರ ವಹಿಸುತ್ತಾರೆ. ಕಡೇಕಾರು ಗ್ರಾಮದ ಮೋಗವೀರರ ಗರತಿಯರು ಮತ್ಸ್ಯೋದ್ಯಮದಲ್ಲಿ ತೊಡಗಿಸಿಕೊಂಡು ಪ್ರಗತಿ ಸಾಧಿಸಿದ್ದಾರೆ. ಇಲ್ಲಿಯ ಅನೇಕ ಸ್ತ್ರೀಯರು ಮೀನುಗಾರಿಕೆ ಮತ್ತು ಸಂಸ್ಕರಣ ಕೈಗಾರಿಕೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಕಡೇಕಾರು ಗ್ರಾಮದಲ್ಲಿ ಮಗು ಹುಟ್ಟಿದಾಗ ೭ ದಿವಸಗಳ ನಂತರ ನಾಮಕರಣ ಮಾಡುತ್ತಾರೆ. ಕೆಲವರು ೧೧ ದಿನಕ್ಕೂ ಮಾಡುವುದುಂಟು. ಆ ದಿನ ಎಕ್ಕೆ ಗಿಡದ ನಾರು ತೆಗೆದು ಮಗುವಿಗೆ ಉಡಿದಾರ ಕಟ್ಟುತ್ತಾರೆ. ಹನ್ನೊಂದನೆ ದಿನ ಆಮೆ ಶುದ್ಧವಾಗುತ್ತದೆ. ಕಡೇಕಾರು ಗ್ರಾಮದಲ್ಲಿ ಹೆಣ್ಣುಮಕ್ಕಳು ಮೊದಲನೇ ಬಾರಿ ಮೈ ನೆರೆದಾಗ ತುಳು ಸಂಪ್ರದಾಯದಂತೆ ಕೆಲವೊಂದು ಆಚರಣೆಗಳನ್ನು ಮಾಡುತ್ತಾರೆ. ಬೇರೆ ಬೇರೆ ಬೆಡಗುಗಳ ಮೂರು ಅಥವಾ ಐದು ಮಂದಿ ಹೆಂಗಸರನ್ನು ಮನೆಗೆ ಆಮಂತ್ರಿಸಬೇಕು. ಸಿಪ್ಪೆ ತೆಗೆದ ಏಳು ತೆಂಗಿನಕಾಯಿಗಳನ್ನು

ನೆಲದಲ್ಲಿ ಹರಡಿ ಅದರ ಮೇಲೆ ಆಕೆಯನ್ನು ಕುರಿಸಬೇಕು ಸುತ್ತಲೂ ನಾಲ್ಕು ಮಣ್ಣಿನ ಪಾತ್ರೆಗಳಲ್ಲಿ ಕಲಶದ ನೀರು ತುಂಬಿಸಿಡಬೇಕು. ಬಂದ ಮುತ್ತೈದೆಯರು ಆಕೆಯ ತಲೆಗೆ ಅಕ್ಕಿಕಾಳು ಹಾಕಿ ಆ ಕಲಶಗಳಲ್ಲಿರುವ ನೀರನ್ನು ಎರೆಯುತ್ತಾರೆ. ತುಳುನಾಡಿನ ಅತೀ ಪ್ರಾಚೀನ ಜನಾಂಗವಾದ ಮೊಗವೀರರು ವಂಶಾನುಕ್ರವಾಗಿ ಹೆಣ್ಣು ನೋಡುವ ಮೊದಲು ಬಳಿ ಅಥವಾ ಬೆಡಗುಗಳನ್ನು ನೋಡುತ್ತಾರೆ. ಕಡೇಕಾರು ಗ್ರಾಮದ ಮೊಗವೀರರಲ್ಲಿಯೂ ಇದೇ ರೀತಿ ಇರುತ್ತದೆ.

ಕಡೇಕಾರು ಗ್ರಾಮದಲ್ಲಿ ಬಸುರಿಯಾದ ಮಗಳನ್ನು ಜೋಜ್ಜಲ ಹೆರಿಗೆ ಸಮೀಪವಿರುವ ದಿನವನ್ನು ಆಯ್ಕೆ ಮಾಡಿ ತವರು ಮನೆಗೆ ಕರಕೊಂಡು ಹೋಗಿ ಅಲ್ಲಿ 'ಬಯಕೆ' ಮದುವೆ ನಡೆಸುತ್ತಾರೆ. ಬಯಕೆ ಮದುವೆಗೆ ಯಾವುದಾದರೂ ಐದು ಬಗೆಯ ಭಕ್ಷ್ಯ ತಯಾರಿಸಲೇಬೇಕೆಂಬ ಸಂಪ್ರದಾಯವಿದೆ. ಆ ದಿನ ಬಸಳೆ ಪಲ್ಯ ಅಥವಾ ನುಗ್ಗೆ ಸೊಪ್ಪಿನ ಪಲ್ಯ ಮತ್ತು ಕೋಳಿ ಮೊಟ್ಟೆ ಅಗತ್ಯವಾಗಿಬೇಕು. ಭಕ್ಷ್ಯಗಳನ್ನೆಲ್ಲಾ ಬಳಸಿದ ನಂತರ ಅದರಿಂದ ಸ್ವಲ್ಪ ತೆಗೆದು ಗರ್ಭಿಣಿಯ ಬಾಯಿಗೆ ಮುಟ್ಟಿಸಿ, ಆ ನಂತರ ಒಮದು ಗಂಡು ಮಗುವಿಗೂ, ಹೆಣ್ಣು ಮಗುವಿಗೂ ತಿನ್ನಲು ಕೊಡಬೇಕು. ಬಳಿಕ ಸ್ವಲ್ಪ ಕಜ್ಜಾಯವನ್ನು ಒಂದು ಪೆಟ್ಟಿಗೆ ಒಳಗೆ ಇಟ್ಟು ಅದಕ್ಕೆ ಧಾರೆ ಸೀರೆಯನ್ನು ಮುಟ್ಟಿಸಿ ತುಳಿಸಿಕಟ್ಟೆಯ ಬಳಿ ಪ್ರತ್ಯೇಕವಾಗಿ ತೆಗೆದಿಡುತ್ತಾರೆ. ಬಳಿಕ ಎಲ್ಲರೂ ಊಟ ಮಾಡುತ್ತಾರೆ. ತುಳುನಾಡಿನ ಮೋಗವೀರರು ಭೂತಾರಾದಕರು ಎಂಬುದು ತಿಳಿದಿರುವ ವಿಷಯ. ಕಡೇಕಾರಿನಲ್ಲಿಯು ಭೂತಾರಾಧನೆಯನ್ನು ನಂಬಿ ಮೋಗವೀರರು ವಾಸವಾಗಿದ್ದಾರೆ. ಇವರ ಮೂಲದೈವ ಬಬ್ಬರಿಯ. ಪಂಜುರ್ಲಿ, ಜೈಕಾಡ್ತಿಯಮ್ಮನನ್ನು ಬಲವಾಗಿ ನಂಬುತ್ತಾರೆ. ಮೋಗವೀರರ ಕುಲದೇವತೆಯರು ಬಾರಕೂರು ಬೆಣ್ಣೆ ಕುದ್ರಿನ ಮಾಸ್ತಿಯಮ್ಮ, ಉಚ್ಚಿಲದ ಶ್ರೀ ಮಾಹಾಲಕ್ಮೀ, ಬಗ್ವಾಡಿಯ ಮಹಿಷಮರ್ದಿನಿ. ಒಂದೊಂದು ಹೋಬಳಿಗೆ ಒಂದೊಂದು ದೇವರಂತೆ, ಪ್ಯೂಜಿಸುತ್ತಾರೆ. ಮೋಗವೀರರು ವೈಷ್ಣವರಾಗಿದ್ದು, ತಿರುಪತಿ ವೆಂಕಟರಮಣನನ್ನು ಆರಾಧಿಸುತ್ತಾರೆ. ಇವರಲ್ಲಿ ಹಾದೇರಾಯನ ವಾಲ್ಗ, ಶನಿಪುರಾಣ, ಸಾವಿರಹಣ್ಣಿನ ವಸಂತ ಹರಿಸೇವೆ ಮೊದಲಾದ ಆಚರಣೆಗಳಿವೆ. ಸಮಾಜಕ್ಕೆ ಮೀನುಗಾರ ಮಹಿಳೆಯರ ಮಹಿಳೆಯರ ಕೊಡುಗೆ ಅನೇಕ ರೀತಿಯಗಿದೆ. ತುಳುನಾಡಿನ ಹೆಮ್ಮೆಯ ಹೆಣ್ಣು ಮಕ್ಕಳಾದ ಇವರು ಸಮಾಜಕ್ಕೆ ಮಾದರಿಯಾಗಿ ಬದುಕುತ್ತಿದ್ದಾರೆ. ಇವರ ಶ್ರಮಜೀವನ, ಸಹಬಾಳ್ವೆ, ಧೈರ್ಯ ಮತ್ತು ಛಲ, ಮಕ್ಕಳ ವಿದ್ಯಾಭ್ಯಾಸದಲ್ಲಿ ಅವರ ಆಸಕ್ತಿ, ಮೆಚ್ಚುವಂತದ್ದು. ಕಡೇಕಾರು ಗ್ರಾಮದಲ್ಲಿ ಪ್ರಸ್ತುತ ಸಂಧರ್ಭದಲ್ಲಿ ಮೋಗವೀರ ಮಹಿಳೆಯರ ಸ್ಥಾನಮಾನ ಉನ್ನತಿಕರಣಗೊಂಡಿದೆ. ಅವರು ಪ್ರಬುದ್ಧರಾಗುತ್ತಿದ್ದಾರೆ.

ಮೋಗವೀರ ಸಮುದಾಯದಲ್ಲಿ ಗಂಡಸರು ಹೆಂಗಸರನ್ನು ಗೌರವದ ದೃಷ್ಟಿಯಿಂದ ನೋಡುತ್ತಾರೆ. ಕಡೇಕಾರು ಗ್ರಾಮದಲ್ಲಿ ಮಹಿಳೆಯು ಪ್ರಧಾನ ಭೂಮಿಕೆಯಲ್ಲಿದ್ದಾಳೆ. ಪುರುಷ ಪ್ರಧಾನ ಸಮಾಜದಲ್ಲಿ ಮೋಗವೀರ ಮಹಿಳೆಯರು ಮುಖ್ಯವಾಹಿನಿಯಲ್ಲಿರುವುದು ನಮಗೆಲ್ಲಾರಿಗು ಹೆಮ್ಮೆಯಾ ವಿಷಯವಾಗಿದೆ. ಕಡೇಕಾರು ಗ್ರಾಮದ ಮೋಗವೀರ ಮೀನುಗಾರ ಮಹಿಳೆಯರು ಸಮಾಜದ ಉಳಿದ ಹೆಣ್ಣು ಮಕ್ಕಳಿಗೆ ನೀಡಿರುವ ಸಂದೇಶಗಳೆಂದರೆ; ಸಮಾಜದ್ದಲ್ಲಿ ಸ್ಪರ್ಧೆ ನೀಡಲೆಂದು ದುಡಿಮೆ ಮಾಡಬೇಡಿ, ನಿಮ್ಮ ಸ್ವಾವಲಂಭಿತನವನ್ನು ಉಳಿಸಿಕೊಳ್ಳಲಿಕ್ಕೆಂದು ಕೆಲಸಮಾಡಿ. ಹೆಣ್ಣು ಮಕ್ಕಳಿಗೆ ಗಟ್ಟಿತನ ಅಗತ್ಯವಾಗಿ ಬೇಕು, ಅದು ತಕ್ಷಣಕ್ಕೆ ಬರುವಂತದ್ದಲ್ಲ, ನಿರಂತರ

ಯತ್ನದಿಂದ ಸಮಸ್ಯೆಗಳನ್ನು ಎದುರಿಸುತ್ತಾ ಹೋದಹಾಗೇ ಜಾಗ್ರತಗೊಳ್ಳಬೇಕು. ನಮ್ಮ ಮಾರ್ಗ ಸುಲಭವಿಲ್ಲ ವಾದ ಮುಳ್ಳುಬೇಲಿಗಳನ್ನು ನಾವುಹಾದು ಹೋಗಬೇಕಾಗಿದೆ. ಬಹಳ ಎಚ್ಚರಿಕೆಯಿಂದ ನಿಭಾಯಿಸಬೇಕಾಗಿದೆ, ್ಮ ಗುರಿ, ಸ್ಪಷ್ಟ ನಿಲುವುಗಳೇ ನಮ್ಮನ್ನು ಯಶದ ಹಾದಿಯಲ್ಲಿ ಕರೆದುಕೊಂಡು ಹೋಗುತ್ತವೆ. ಈ ಲ್ಯಗಳನ್ನು ಅನುಸರಿಸಿಯೇ ಅವರು ಉತ್ತಮ ಬದುಕು ಕಟ್ಟಿಕೊಂಡಿದ್ದಾರೆ.

## ಪರಾಮರ್ಶನ ಗ್ರಂಥಗಳು

೧. ಬೋರಲಿಂಗಯ್ಯ ಹಿ. ಚಿ ಸಂಪಾದಕರು. ೧೯೫೦-೨೦೦೬.೨೦೦೭ ಸುವರ್ಣ ಕರ್ನಾಟಕ ಅಭಿವೃದ್ಧಿ ಪಥ. ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೨. ದಕ್ಷಿಣ ಕನ್ನಡ ಗ್ಯಾಸಿಟಿಯರ್. ಗ್ಯಾಸಿಟಿಯರ್ ಇಲಾಖೆ ಕರ್ನಾಟಕ ಸರಕಾರ(ಕನ್ನಡ)

೩. ಇ ತಸ್ಟನ್. ಕ್ಯಾಸ್ಟ್ ಇನ್ ಟ್ರೈಬ್ಸ್ ಆಫ್ ಇಂಡಿಯ

೪. ಉಂಚಇಖಿಖಿಇಇಖ ಔಈ ಖಔಗಖಿಊ ಅಂಓಂಖಂ. ಉಂಚಇಖಿಇಇಖ ಆಇಕಂಖಖಿಒಇಓಖಿ . ಉಔಗಿಇಖಓಒಇಓಖಿ ಔಈ ಏಂಖಓಂಖಿಂಏಂ

೫. ಕರ್ನಾಟಕ ಗ್ಯಾಸಿಟಿಯರ್ ಇಲಾಖೆ. ಕರ್ನಾಟಕ ಸರಕಾರ ಬೆಂಗಳೂರು.

೬. ಮೋಹನ್ ಕೃಷ್ಣ ರೈ.ಕೆ. ೨೦೧೨. ತುಳುನಾಡು ಕನ್ನಡ ನುಡಿ. ತುಳು ಕರ್ನಾಟಕ ನಾಡು-ನುಡಿ ಚಿಂತನೆ. ಕನ್ನಡ ವಿಶ್ವ ವಿದ್ಯಾಲಯ ಹಂಪಿ.

೭. ಪ್ರಶಾಂತ್ ಹೆಚ್ ಡಿ. ಕರ್ನಾಟಕ ಸಮುದಾಯಗಳು.

೮. ಪಾದನೂರು ಗುರುರಾಜ ಭಟ್ .೨೦೦೯. ಪ್ರ೧೯೬೩. ತುಳುನಾಡು. ಪ್ರಕಾಶ್ ಆಫ್‌ಸೆಟ್- ಮಂಗಳೂರು.

೯.ವೆಂಕಟರಾಜ ಪುಣಿಚಿತ್ತಾಯ. ೧೯೯೩. ಮೋಗವೀರ ಸಂಸ್ಕೃತಿ. ಉಪ ಸಂಸ್ಕೃತಿ ಮಾಲೆ. ಕರ್ನಾಟಕ ಸಾಹಿತ್ಯ ಅಕಾಡಮಿ ಬೆಂಗಳೂರು.

## ವಕ್ತೃಗಳ ವಿವರ

**ಅಪ್ಪಿ ಬಂಗೇರ** ಭಾಗ್ಯ ಶ್ರೀ ನಿಲಯ, ಕಡೇಕಾರು ಗ್ರಾಮ, ಕಿದಿಯೂರು ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಅಪ್ಪಿ ಸುವರ್ಣ** ಸುವರ್ಣ ನಿವಾಸ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಅಶ್ವಿನಿ** ಶ್ರೀದುರ್ಗ ಪ್ರಸಾದ್ ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಗುರ್ಬಿ ತಿಂಗಳಾಯ** ಹರಿ ನಿವಾಸ ಕುದ್ರುಕೆರೆ, ಕಡೇಕಾರು ಗ್ರಾಮ ಮತ್ತು ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ

**ಗೋದು ಕುಂದರ್** ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಹೇಮ ಪುತ್ರನ್** ನಿವಾಸ, ಕಡೇಕಾರು ಗ್ರಾಮ, ಕಿದಿಯೂರು ಅಂಚೆ ಕುಂದಾಪುರ ತಾಲೋಕು ಉಡುಪಿ ಜಿಲ್ಲೆ.

**ಪದ್ಮ ಮಾತೃಜೋತಿ** ನಿವಾಸ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಪುಷ್ಪ ಆರ್. ಕೋಟ್ಯನ್** ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ರಜನಿ ಕಡೇಕಾರು** ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ರಾಧ ನಾಯಕ್** ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಸರಸು ಕೋಟ್ಯಾನ್** ಪುಷ್ಪ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಸುಶೀಲ ಸುವರ್ಣ** ನಿವಾಸ, ಕಡೇಕಾರು ಗ್ರಾಮ, ಕಿದಿಯೂರು ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಸುಶೀಲ ಕಡೇಕಾರು** ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಸುಶೀಲ** ನಿವಾಸ, ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಸುಂದರಿ** ಬಿ/ನ್ ರಾಮ ಕರ್ಕೇರ ನಿವಾಸ, ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಸುಂದರಿ .** ಮೈದಾನ್ ನಿವಾಸ ಕಡೇಕಾರು ಗ್ರಾಮ, ಕಿದಿಯೂರು ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ತುಕರಿ ಕೋಟ್ಯನ್** ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ತಾರಪತಿ ತ ಕುಂದರ್** ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಶಕುಂತಲ ಜೆ.ಸಾಲ್ಯನ್** ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

**ಶಾರದ ಕುಂದರ್** ರಾಧ ನಿವಾಸ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

# ಸಂದರ್ಶನ

ಅಪ್ಪಿ ಬಂಗೇರ ಭಾಗ್ಯ ಶ್ರೀ ನಿಲಯ, ಕಡೇಕಾರು ಗ್ರಾಮ, ಕಿದಿಯೂರು ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

ಅಪ್ಪಿ ಸುವರ್ಣ ಸುವರ್ಣ ನಿವಾಸ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

ಅಶ್ವಿನಿ ಶ್ರೀದುರ್ಗ ಪ್ರಸಾದ್ ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

ಬೇಟಿ ಮಾಡಿರುವ ವಕ್ತರುಗಳ ವಿವರ:- ಗುರ್ಜಿ ತಿಂಗಳಾಯ ಹರಿ ನಿವಾಸ ಕುದ್ರುಕೆರೆ, ಕಡೇಕಾರು ಗ್ರಾಮ ಮತ್ತು ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ

ಗೋದು ಕುಂದರ್ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

ಹೇಮ ಪುತ್ರನ್ ನಿವಾಸ, ಕಡೇಕಾರು ಗ್ರಾಮ, ಕಿದಿಯೂರು ಅಂಚೆ ಕುಂದಾಪುರ ತಾಲೋಕು ಉಡುಪಿ ಜಿಲ್ಲೆ.

ಪದ್ಮ ಮಾತೃಜ್ಯೋತಿ ನಿವಾಸ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

ಪುಷ್ಪ ಆರ್. ಕೋಟ್ಯಾನ್ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

ರಜನಿ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

ರಾಧ ನಾಯಕ್ ಕಡೇಕಾರು ಗ್ರಾಮ, ಕುದ್ರಕೆರೆ ಅಂಚೆ ಉಡುಪಿ ತಾಲೋಕು ಉಡುಪಿ ಜಿಲ್ಲೆ.

ಉಡುಪಿ ಜಿಲ್ಲೆಯ ನಕ್ಷೆ

ಉಡುಪಿ ಜಿಲ್ಲೆಯ ತಾಲೋಕುಗಳು

## Udupi District



ಮೋಗವೀರ ಸಮುದಾಯದ ವಿವಿಧ ಆಚರಣೆಗಳು



ಪಾತ್ರಿ ದರ್ಶನ



ನಾಗಮಂಡಲ



ನಾಗದರ್ಶನ



ಪ್ರಾಣಿ ಬಲಿ



ಕರಾವಳಿ ಗಂಡು ಕಲೆ ಯಕ್ಷಗಾನ



ತುಳಸಿಕಟ್ಟೆ





ಬೊಬ್ಬರಿಯ ದೇವರು (ಒಡೆಯಾ)















ಸುಬ್ರಮ್ಮಣ್ಯ



ನಾಗ



ಅಸ್ವತ ಮರ

# ಮೊಗವೀರರ ಭೂತದ ಮನೆಗಳು









ಮೆಂಡನ್ ಮೂಲಸ್ಥಾನ ಕೋಟೆ









ಮಲ್ಪೆ ಬಂದರು(ಟ್ರಾಲ್ ದೋಣಿಗಳು)



ರಂಪಣಿ ಬಲೆ



ೀಪಸ್ತಂಭ ಸುರತ್ಕಲ್



ೀಪಸ್ತಂಭ ಮಂಗಳೂರು



ಾಡದೋಣಿಗಳು






ರಂಪಣಿ ಬಲೆಯ ಮೂಲಕ ಮೀನು ಹಿಡಿಯಲು ಹೊರಟ ದೋಣಿ



ಯಾಂತ್ರಿಕ ದೋಣಿಗಳು



ಮೋಗವೀರ ಮಹಿಳೆಯರು ಮಾರುವ ಮೀನುಗಳು














ಮೋಗವೀರ ಮಹಿಳೆಯರು ಮೀನು ಮಾರುಕಟ್ಟೆಯಲ್ಲಿ ಮೀನು ಮಾರಾಟ ಮಾಡುತ್ತಿರುವುದು



ಮೋಗವೀರ ಮಹಿಳೆಯರು ಮಲ್ಪೆ ಬಂದರಲ್ಲಿ ಮೀನು ರಾಶಿ ಮಾಡುವುದು

ಮೋಗವೀರ ಪುರುಷರು ದೋಣಿಗಳಿಂದ ಮೀನು ಖಾಲಿ ಮಾಡುತ್ತಿರುವುದು







ಒಣಗಿದ ಮೀನನ್ನು ಬುಟ್ಟಿಯಲ್ಲಿ ತುಂಬುತ್ತಿರು ಮೋಗವೀರ ಮಹಿಳೆಯರು



ಒಣಗಿದ ಮೀನನ್ನು ಬುಟ್ಟಿಯಲ್ಲಿ ಜೋಡಿಸಿರುವುದು



ಧಾನ್ಯಗಳು ಹಾಳಾಗದಂತೆ ತಿರಿಗಳಲ್ಲಿ ಇರಿಸುವುದು



ಸ್ವಲ್ಪ ಧಾನ್ಯ ವಿದ್ದರೆ ಈ ರೀತಿಯಾ ಮುಡಿಗಳನ್ನು ಕಟ್ಟುತ್ತಾರೆ

